ಯೂಲಿಯ ದ್ರೂನಿನ

# ಅಲೀಸ್ಕ

ಚಿತ್ರಗಳು: ವೆನಿಯಮೀನ್ ಕೊಸ್ತೀನ್



ಅನುವಾದ: ಕೆ. ಎಲ್. ಗೋಪಾಲಕೃಷ್ಣರಾವ್



ರಾದುಗ ಪ್ರಕಾಶನ
ಮಾಸ್ಕೋ



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.
ಬೆಂಗಳೂರು



ಇದು ಜರುಗಿದ್ದು 1944ರ ಶರತ್ಕಾಲದಲ್ಲಿ, ಎಸ್ತೋನಿಯಾದಲ್ಲಿ. ಆಗ ಸೋವಿಯತ್ ಒಕ್ಕೂಟವು ನಾಜಿ ಜರ್ಮನಿಯ ವಿರುದ್ಧ ಯುದ್ಧದಲ್ಲಿ ನಿರತವಾಗಿತ್ತು.

ನಾನು ಸ್ವಯಂಚೋದಿತ ಬಂದೂಕಗಳ ರೆಜಿಮೆಂಟಿನಲ್ಲಿ ಫೀಲ್ಡ್ ನರ್ಸ್ ಆಗಿ ಕೆಲಸ ಮಾಡುತ್ತಿದ್ದೆ. ಮುಂದುಮುಂದಾಗಿ ಹೋಗುತ್ತಿದ್ದ ದಳಗಳೊಂದಿಗೆ ಪ್ರಯಾಣ ಮಾಡಿದ್ದೆ. ಆದರೆ ನಮ್ಮ ವೈದ್ಯೋಪಚಾರದ ಕಾರು ಹಿಂದೆಯೇ ಎಲ್ಲೋ ಸಿಕ್ಕಿಹಾಕಿಕೊಂಡು ಬಿಟ್ಟಿತ್ತು. ಅದರೊಂದಿಗೆ ನನ್ನ ಸಂಪರ್ಕ ಕಡಿದು ಹೋಗಿತ್ತು. ನನ್ನ ಬಳಿ ಇದ್ದ ಗಾಯದ

ಪಟ್ಟಿಗಳ ದಾಸ್ತಾನು ಬೇಗ ಬೇಗ ಮುಗಿಯುತ್ತಿತ್ತು. ನನಗೆ ಗಾಬರಿಯೋ ಗಾಬರಿ. ನಮ್ಮ ದಳಗಳು ಈಗ ದಾಳಿ ಮಾಡುವ ಕಾರ್ಯದಲ್ಲಿ ನಿರತವಾಗಿದ್ದವು. ಇಂಥ ಸಂದರ್ಭಗಳಲ್ಲಿ ಗಾಯಗೊಳ್ಳುವವರ ಸಂಖ್ಯೆ ಯಾವತ್ತೂ ಹೆಚ್ಚಾಗಿಯೇ ಇರುತ್ತದೆ.

ಹೀಗಿರುವಾಗ ಒಮ್ಮೆ ನಾವು ಆಗಷ್ಟೆ ವಶಪಡಿಸಿಕೊಂಡಿದ್ದ ಎಸ್ಟೋನಿಯನ್ ಕೃಷಿ ಕ್ಷೇತ್ರವೊಂದರಲ್ಲಿ ಒಬ್ಬ ವೃದ್ಧ ಹೆಂಗಸು ನನ್ನ ಬಳಿ ಬಂದಳು. ಅವಳ ಕೈಗಳಲ್ಲಿ ಒಂದು ಕೊಳಕಾದ ಬಿಳಿ ಕೋಳಿ ಇತ್ತು. ಅದು ಹುಚ್ಚಾಪಟ್ಟೆ ಕವಗುಟ್ಟುತ್ತಿತ್ತು. ಅವಳು ಅದನ್ನು ಪ್ರೀತಿಯಿಂದ ನೇವರಿಸುತ್ತಿದ್ದಳು.

ಅವಳಿಗೆ ರಷ್ಯನ್ ಬರುತ್ತಿರಲಿಲ್ಲ. ಆದರೂ ತನಗೇನು ಬೇಕಾಗಿದ್ದಿತೆಂಬುದನ್ನು ಸಾಕಷ್ಟು ಸ್ಪಷ್ಟವಾಗಿಯೇ ತಿಳಿಸಿದಳು. ಅವಳ ಕೋಳಿ ಒಂದು ಕಾಲನ್ನು ಮುರಿದು ಕೊಂಡಿತ್ತು. ಸ್ಪಷ್ಟವಾಗಿಯೇ ಅದು ನಮ್ಮ ಫಿರಂಗಿದಾಳಿಯ ಪರಿಣಾಮವಾಗಿತ್ತು.

ತನ್ನ ಕೋಳಿಗೆ ಸಹಾಯ ಮಾಡಬೇಕೆಂಬ ಅವಳ ಕೋರಿಕೆ ಅವಿವೇಕವಾಗಿದ್ದಿತೆಂದೇನೂ ನನಗೆ ಅನಿಸಲಿಲ್ಲ. ಮನುಷ್ಯರಿಗಷ್ಟೆ ನೋವಿನ ಸಂವೇದನೆ ಆಗುವುದು ಎಂದು ಭಾವಿಸು ವಂಥ ಜನರ ಸಂವರ್ಗಕ್ಕೆ ಸೇರಿದವಳಲ್ಲ ನಾನು.

ಆದರೆ ನನ್ನ ಸಂಗಾತಿಗಳು ಏನು ಹೇಳುವರೋ?

ನನ್ನ ಬಳಿ ಗಾಯದ ಪಟ್ಟಿಗಳ ದಾಸ್ತಾನು ಸಾಕಷ್ಟಿಲ್ಲ ಎಂದು ನಾನು ಅವಳಿಗೆ ವಿವರಿಸಿ ತಿಳಿಸಲು ಯತ್ನಿಸಿದೆ. ಆದರೆ ಅವಳು ನನ್ನ ಮಾತನ್ನು ತನ್ನ ಕಿವಿಯ ಮೇಲೆ ಹಾಕಿಕೊಳ್ಳ ದೆಯೇ ತನ್ನ ಕೋಳಿಯನ್ನು ಒಂದೇ ಸಮನೆ ನನ್ನ ಕೈಯಿಗೆ ತುರುಕುತ್ತಿದ್ದಳು.

ನಮ್ಮ ಸುತ್ತ ಕುತೂಹಲಿ ಸೈನಿಕರ ಒಂದು ಗುಂಪೇ ನೆರೆಯಿತು. ಇದ್ದಕ್ಕಿದ್ದಂತೆ ಮಧ್ಯ ವಯಸ್ಸಿನ ಸೈನಿಕನೊಬ್ಬನ ದೂಷಣೆಯ ಧ್ವನಿ ಕೇಳಿ ಬಂದಿತು:

"ಪಾಪ, ಜೀವಂತ ಪ್ರಾಣಿ, ನೋವಿನಿಂದ ನರಳುತ್ತಿದೆ! ನಿನಗೇನು ಹೃದಯವಿಲ್ಲವೇ, ಹುಡುಗಿ?"

ಮತ್ತೊಬ್ಬ, ಅವನಿಗಿಂತ ಚಿಕ್ಕವ, ಅವನಿಗೆ ಬೆಂಬಲ ನೀಡಿದ: "ನಗರದ ಈ ಜನರೆಲ್ಲ ಒಂದೇ. ಇವರಿಗೆ ಒಂದಿಷ್ಟೂ ತಿಳಿವಳಿಕೆ ಇಲ್ಲ."

ಅನಂತರ ಬಂದಿತು ಖಂಡನೆಯ ಸುರಿಮಳೆ. ಓಹ್, ನನ್ನ ಹೃದಯರಾಹಿತ್ಯತೆಯ ಬಗೆಗೆ ಏನೆಲ್ಲ ಹೇಳಿದರು! ಈಗಲೂ ಅದನ್ನು ನೆನಸಿಕೊಂಡರೆ ನನಗೆ ಬೇಸರವಾಗುತ್ತೆ.

ನಿಜ, ಅವರಲ್ಲಿ ಒಬ್ಬ ವಿನೋದಗಾರನೂ ಇದ್ದ ಎನ್ನಿ. "ಗಾಯಗೊಂಡಿದ್ದ" ಕೋಳಿ

ಸಾರು ಮಾಡಲು ಸೊಗಸಾಗಿರುತ್ತೆ, ಎಂದ ಅವ. ಉಳಿದವರೆಲ್ಲ ಅವನ ಕಡೆಗೆ ಎಂಥ ಉಗ್ರ ನೋಟ ಬೀರಿದರೆಂದರೆ ಅವನು ತಕ್ಷಣವೇ ತೆಪ್ಪಗಾಗಿ ಕಣ್ಣು ಪಿಳಿಪಿಳಿ ಬಿಡುತ್ತ ನಿಂತ.

ನಾನು ಪೆಟ್ಟಿಗೆ ತೆರೆದೆ. ಯಾರೋ ನನಗಾಗಿ ಎರಡು ದೆಬ್ಬೆ ತುಂಡುಗಳನ್ನು ನಯ ಮಾಡಿಕೊಟ್ಟರು. ನಾನು ವೈದ್ಯವಿಜ್ಞಾನಕ್ಕೆ ಸಂಪೂರ್ಣವಾಗಿ ಅನುಗುಣವಾಗಿ ಆ ದೆಬ್ಬೆಗಳನ್ನು ಕೋಳಿಯ ಕಾಲಿಗೆ ಜೋಡಿಸಿ ಗಾಯದ ಪಟ್ಟಿ ಕಟ್ಟಿದೆ.

ಹೀಗೆ ರಣಾಂಗಣದ ಮುಂಚೂಣಿ ಸೈನಿಕರು ನನಗೆ ಕಾರುಣ್ಯದ ಒಂದು ವಸ್ತುನಿಷ್ಠ ಪಾಠ ಕಲಿಸಿದ್ದರು. ನ್ಯಾಯವಾಗಿ ಯುದ್ಧ ಇವರಲ್ಲಿನ ಎಲ್ಲ ಭಾವುಕತೆಯನ್ನೂ ತೊಡೆದು ಹಾಕಿರಬೇಕಿದ್ದಿತಲ್ಲವೇ ?

ಈ ಪಾಠವನ್ನು ನಾನು ಸದಾ ನೆನಪಿನಲ್ಲಿಟ್ಟಿದ್ದೇನೆ. ಈಗಲೂ ಅಲೀಸ್ಕ ಬಗೆಗೆ ಈ ಕಥೆಯನ್ನು ಬರೆಯುತ್ತಿರುವಾಗಲೂ ನನಗದು ನೆನಪಿಗೆ ಬರುತ್ತಿದೆ. ಅನೂಹ್ಯ ದೂರದ ಆ ಯುದ್ಧ, ಆ ಶರತ್ಕಾಲ, ಹೆಗಲಿಗೆ ಒಂದು ರೆಡ್‌ಕ್ರಾಸ್ ಚೀಲ ತೂಗಿಹಾಕಿಕೊಂಡ ವಿಚಿತ್ರ ಹುಡುಗಿಯಾಗಿದ್ದ ನಾನು, ನನ್ನ ಕೈಗಳಲ್ಲಿದ್ದ ಆ ಕವಗುಟ್ಟುತ್ತಿದ್ದ ಕೋಳಿ – ಇವೆಲ್ಲ ನೆನಪಿಗೆ ಬರುತ್ತವೆ.

ಒಂದು ದಿನ ನನ್ನ ಹದಿನೈದು ವರ್ಷದ ಮಗಳು ಅಲ್ಯೋನ ನನಗೆ ಒಂದು ನಾಯಿಯ ಬಗೆಗೆ ಹೇಳಿದಳು. "ತನ್ನನ್ನೇ ಮಾರಿಕೊಳ್ಳಲು" ಯತ್ನಿಸುತ್ತಿದ್ದಿತಂತೆ ಆ ನಾಯಿ.

ಅಲ್ಯೋನ ಆ ವಿಚಿತ್ರ ಪ್ರಾಣಿಯನ್ನು ಮಾಸ್ಕೋದಲ್ಲಿನ "ಪಕ್ಷಿಗಳ ಮಾರುಕಟ್ಟೆ" ಎನ್ನುವಂಥ ಸ್ಥಳದಲ್ಲಿ ಸಂಧಿಸಿದ್ದಳು. ಪ್ರತಿ ಭಾನುವಾರವೂ ಅಲ್ಲಿಗೆ ಹೋಗುವುದು ಅವಳಿಗೆ ವಾಡಿಕೆ. ಅಲ್ಲಿ ಪಕ್ಷಿಗಳನ್ನಷ್ಟೆ ಅಲ್ಲ ನಾನಾ ರೀತಿಯ ಪ್ರಾಣಿಗಳನ್ನು ಮಾರುತ್ತಾರೆ – ಮೀನು, ಗಿನಿಯಿಲಿ, ನಾಯಿ...

*

ನಾಯಿ ಮಾರಾಟಗಾರರು ಒಂದು ಎತ್ತರವಾದ ಕಲ್ಲಿನ ಕಟಕಟೆಯ ಉದ್ದಕ್ಕೂ ಸಾಲಾಗಿ ಕುಳಿತಿದ್ದರು. ಅಲ್ಲಿನ ಅಸಾಮಾನ್ಯ ವಾತಾವರಣದಿಂದಲೂ ತಮಗೆ ಸದ್ಯದಲ್ಲೇ ದ್ರೋಹ ಬಗೆಯಲಾಗುತ್ತದೆ ಎಂಬ ಯಾವುದೋ ಮುನ್ನಳುಕಿನಿಂದಲೂ ಕೆರಳಿದ್ದ ನಾಯಿ

ಗಳು ತಮ್ಮ ಮುಂದೆ ಹಾದು ಹೋಗುತ್ತಿದ್ದ ಜನರತ್ತ ಒಂದೇ ಸಮನಾಗಿ ಬೊಗುಳು ತ್ತಿದ್ದವು. ವಾಸ್ತವವಾಗಿ ಅವುಗಳ ಮಾಲೀಕರು ಅವುಗಳನ್ನು ಹಾಗೆ ಮಾಡುವಂತೆ ರಹಸ್ಯ ವಾಗಿ ಒತ್ತಾಯಿಸುತ್ತಿದ್ದರು – ಕುದುರೆಗಳು ಚುರುಕಾದವಂತೆ ಕಾಣಲೆಂದು ಜಿಪ್ಸಿಗಳು ಅವುಗಳನ್ನು ಕೆರಳಿಸುತ್ತಾರೆಂದು ಹೇಳುತ್ತಾರಲ್ಲ, ಹಾಗೆ. ಎಷ್ಟೇ ಆಗಲಿ, ಜನ ನಾಯಿಗಳನ್ನು ಹೆಚ್ಚಾಗಿ ಕೊಳ್ಳುವುದು ತಮ್ಮ ಮನೆಗಳನ್ನು ಕಾಯಲೆಂದು, ಅಲ್ಲವೇ ? ನಾಯಿ ಎಷ್ಟು ಕೋಪದಿಂದ ಕೂಡಿದುದಾಗಿ ಕಂಡರೆ ಅದಕ್ಕೆ ಅಷ್ಟೂ ಹೆಚ್ಚು ಬೆಲೆ.

ಇವೆಲ್ಲವುಗಳಲ್ಲದೆ ಕಟಕಟೆಯ ಬಳಿ ಒಂದು ತೀರ ಬಡಕಲಾದ ಕೊಳಕಾದ ಅಲ್ಸೇಷಿ ಯನ್ ನಾಯಿಯೂ ಕುಳಿತಿತ್ತು. ಅದು ಒಂಟಿಯಾಗಿ ಮೌನದಿಂದ ಕುಳಿತಿತ್ತು. ಹೊಸ ಮಾಲೀಕನೊಂದಿಗೆ ಹೊರಟ ಪ್ರತಿಯೊಂದು ನಾಯಿಯನ್ನೂ ಅಸೂಯೆಯಿಂದ ನೋಡುತ್ತ ಕುಳಿತಿತ್ತು. ಅದರ ಶೋಕದಿಂದ ಕೂಡಿದ ಕಣ್ಣುಗಳು, ನಾಚಿಕೆಯಿಂದ ಆಡು ತ್ತಿದ್ದ ಅದರ ಬಾಲ, ಅದರ ಬಿಗುಪಿನ ಇಡೀ ಭಂಗಿ, "ನನ್ನನ್ನೂ ತೆಗೆದುಕೊಳ್ಳಿ, ದಯ ವಿಟ್ಟು ! ನಿಮ್ಮನ್ನು ಬೇಡಿಕೊಳ್ಳುತ್ತೇನೆ !" ಎಂದು ಹೇಳುವಂತೆ, ಇಲ್ಲ, ಕೂಗಿ ಹೇಳುವಂತೆ, ಕಂಡುಬರುತ್ತಿತ್ತು.

ಆದರೆ ಬೆಲೆ ಗುರುತಿಸಿರದ ವಸ್ತುವಿನಲ್ಲಿ ಯಾರಿಗೆ ಆಸಕ್ತಿ ಇರುತ್ತೆ ? ತನ್ನನ್ನೇ ಮಾರಿ ಕೊಳ್ಳುವ, ಇಲ್ಲ, ತನ್ನನ್ನೇ ಕೊಟ್ಟುಕೊಳ್ಳುವ ನಾಯಿ – ಇದೊಂದು ವಿಚಿತ್ರ ಪ್ರಸಂಗ. ಸಂಶಯಾತ್ಮಕವೆಂದೂ ಹೇಳಬಹುದು. ನಾಯಿಯೇನೋ ಅಲ್ಸೇಷಿಯನ್ ಎಂದೇ ಕಂಡು ಬರುತ್ತಿತ್ತು. ಆದರೆ ಅದರ ವಂಶಾವಳಿಯನ್ನು ಕೇವಲ ಊಹಿಸಬಹುದಿತ್ತು !

ಈಗ ಮೂರು ಭಾನುವಾರಗಳಿಂದ ಅಲ್ಯೋನ ಈ ನಾಯಿಯನ್ನು, ಅದು ಮಾರು ಕಟ್ಟೆಯಲ್ಲಿ ಯಾವಾಗಲೂ ಅದೇ ಸ್ಥಳದಲ್ಲಿ ಕುಳಿತಿರುವುದನ್ನು ನೋಡುತ್ತಿದ್ದಾಳೆ. ಪ್ರತಿ ಬಾರಿಯೂ ಅದರ ಕಣ್ಣುಗಳಲ್ಲಿ ಹೆಚ್ಚುಹೆಚ್ಚು ನಿರಾಶೆ ಕಂಡುಬರುತ್ತಿತ್ತು, ಅದರ ಮೂಳೆಗಳು ಹೆಚ್ಚು ಎದ್ದುಕಾಣುವಂತಿರುತ್ತಿದ್ದವು.

ಅಲ್ಯೋನಳು ಹೇಳಿದ ಈ ಕಥೆಯನ್ನು ಕೇಳಿದನಂತರ ನಾವು ಆ ನಾಯಿಯನ್ನು, ಅದರ ವಂಶಾವಳಿ ಏನೇ ಆಗಿರಲಿ, ಶುದ್ಧ ಅಡ್ಡತಳಿ ನಾಯಿಯಾದರೂ ಸರಿಯೆ, ಮನೆಗೆ ತಂದು ಸಾಕಬೇಕೆಂದು ನಿರ್ಧರಿಸಿದೆವು.

ಹಾಗಾಗಿ ಮಾರನೆಯ ಭಾನುವಾರ ನಾವು ಆ "ಪಕ್ಷಿಗಳ ಮಾರುಕಟ್ಟೆ"ಯಲ್ಲಿ ಕಾಣಿಸಿ

ಕೊಂಡೆವು, ಅಲ್ಲಿನ ಜನರ ಹಾಗೂ ಪ್ರಾಣಿಗಳ ಗುಂಪಿನ ಮಧ್ಯೆ ದಾರಿ ಮಾಡಿಕೊಂಡು ಹೊರಟೆವು. ಎಷ್ಟು ಥರಾವರಿ ಧ್ವನಿಗಳು ಅಲ್ಲಿ ಕೇಳಿಬರುತ್ತಿದ್ದುದು – ಮನುಷ್ಯರ ಧ್ವನಿ, ನಾಯಿಗಳು ಬೊಗುಳುವ ಧ್ವನಿ, ಪಕ್ಷಿಗಳ ಚಿಲಿಪಿಲಿ ! ನಾನು ದಂಗಾದೆ.

ಆಗ ಇದ್ದಕ್ಕಿದ್ದಂತೆ, ತೊಗಲ ಬಾರನ್ನು ಎಳೆಯುತ್ತ ಗಂಟಲು ಬಿರಿಯುವಂತೆ ಅರುಚುತ್ತ ಇದ್ದ ನಾಯಿಗಳ ಮಧ್ಯೆ ನನಗೆ ಒಂದು ವಿಚಿತ್ರ ಪ್ರಾಣಿ ಕಂಡುಬಂದಿತು. ಅದು ಮಂಜಿನ ಮೇಲೆ ಕುಳಿತಿತ್ತು, ಗಾಬರಿಯಿಂದ ದಿಗ್ಭ್ರಾಂತವಾಗಿದ್ದಂತೆ ಕಂಡುಬರುತ್ತಿತ್ತು. ಅದು ಒಂದು ಬೆಕ್ಕಿನ ಗಾತ್ರದಲ್ಲಿತ್ತು. ಮರಳು ಬಣ್ಣದ ಒಡಲು, ಕಾಂತಿಯಿಂದ ಕೂಡಿದ ಹಳದಿ ಬೊಗಸೆಗಣ್ಣುಗಳು, ಸೆಟೆದ ಶರೀರ, ತುಂಬು ಕೂದಲಿನ ಬಾಲ, ತೆಳುವಾದ ಕಾಲುಗಳು. ಹಿಂದಿನ ಕಾಲುಗಳು "X" ಆಕಾರದಲ್ಲಿ ಮಂಡಿಯ ಬಳಿ ಕೂಡುವಂತಿದ್ದವು.

ಪ್ರಾಣಿಯ ಕೊರಳಿನ ಸುತ್ತ ಮನೆಯಲ್ಲೇ ಮಾಡಿದ್ದ ಒಂದು ಕೊರಳಪಟ್ಟಿ ಇತ್ತು. ಅದಕ್ಕೆ ಒಂದು ಸರಪಣಿ ತಗುಲಿಕೊಂಡಿತ್ತು. ಆ ಸರಪಣಿಯನ್ನು ಗಾಬರಿಗೊಂಡಂತೆ ಕಾಣುತ್ತಿದ್ದ ಒಬ್ಬ ಹುಡುಗ ಹಿಡಿದಿದ್ದ. ಬೇಡವಾಗಿದ್ದ ಆ ಪ್ರಾಣಿಯನ್ನು ಹೇಗಾದರೂ ಮಾಡಿ ತೊಲಗಿಸುವಂತೆ ದೃಢವಾದ ಆಜ್ಞೆ ನೀಡಿ ಅವನನ್ನು ಮನೆಯಿಂದ ಹೊರಕ್ಕೆ ಹಾಕಲಾಗಿದ್ದಿತೇನೋ ಎಂದು ಕಂಡುಬರುತ್ತಿತ್ತು.

ನಾನು ಆ ಪ್ರಾಣಿಯ ಪಕ್ಕದಲ್ಲಿ ಕುಳಿತು ಎಚ್ಚರಿಕೆಯಿಂದ ಅದರ ತಲೆ ನೇವರಿಸಿದೆ. ಅದು ತನ್ನ ಕಿವಿಗಳನ್ನು ಚಪ್ಪಟೆ ಮಾಡಿಕೊಂಡಿತು.

"ಹುಷಾರಾಗಿರಿ, ಅದು ಕಚ್ಚುತ್ತೆ !" ಹುಡುಗ ಕೂಗಿ ಹೇಳಿದ. ಆದರೆ ನಾನಾಗಲೇ ಅದನ್ನು ಎತ್ತಿ ನನ್ನ ತೋಳುಗಳಲ್ಲಿ ಇರಿಸಿಕೊಂಡಿದ್ದೆ. ಅದರ ಹೃದಯ ಡಬಡಬನೆ ಬಡಿದುಕೊಳ್ಳುತ್ತಿತ್ತು. ಅದರ ಇಡೀ ದೇಹ ಸೆಳೆತಕ್ಕೊಳಗಾದಂತೆ ಅದುರುತ್ತಿತ್ತು. ಆಶ್ಚರ್ಯವೇನಿಲ್ಲ ! ಕಾಡು ಪ್ರಾಣಿಯೊಂದಕ್ಕೆ ಇಂಥ ವಾತಾವರಣ ಗಾಬರಿ ಹುಟ್ಟಿಸುವಂತಹುದೇ !

ವಾಸ್ತವವಾಗಿ ನಾನದನ್ನು ಒಂದು "ಕಾಡು ಪ್ರಾಣಿ"ಯನ್ನಾಗಿ ಏನೂ ಭಾವಿಸಲಿಲ್ಲ – ಅದು ಅಷ್ಟು ಶೋಚನೀಯ ಸ್ಥಿತಿಯಲ್ಲಿತ್ತು, ಅಷ್ಟು ಬೆದರಿತ್ತು. ಅಲ್ಲದೆ ಅದಿನ್ನೂ ಎಳೆಯದು ಎಂದೇ ನನಗನ್ನಿಸಿತು. ಅನಂತರವಷ್ಟೆ ನಮಗೆ ತಿಳಿದುದು, ಅದೊಂದು ಎಳೆಯದಾದರೂ ಪೂರ್ಣವಾಗಿ ಬೆಳೆದ ಸ್ಟೆಪ್ ಬೆಂಗಾಡಿನ ನರಿ ಅಂತ, ಒಂದು "ಕೊರ್ಸಾಕ್" ಅಂತ.

"ಕೊರ್ಸಾಕ್" ಪ್ರಾಣಿಗಳ ಬಗೆಗೆ ವಿಶ್ವಕೋಶ ಹೀಗೆ ಹೇಳುತ್ತೆ: "ಕೊರ್ಸಾಕ್ ಸಾಮಾನ್ಯ ನರಿಯಂತೆ ಕಾಣುತ್ತೆ, ಆದರೆ ಗಾತ್ರದಲ್ಲಿ ನರಿಗಿಂತ ಚಿಕ್ಕದು (ಒಡಲ ಉದ್ದ 50-60 ಸೆಂ.ಮಿೀ., ಬಾಲ 25-35ಸೆಂ.ಮಿೀ). ಇದು ಏಷ್ಯ ಹಾಗೂ ಆಗ್ನೇಯ ಯೂರೋಪಿನ ಮರಳುಗಾಡುಗಳಲ್ಲೂ ಅರೆಮರಳುಗಾಡುಗಳಲ್ಲೂ ವಾಸಿಸುತ್ತೆ. ಸೋವಿಯತ್ ಒಕ್ಕೂಟದಲ್ಲಿ ಇದು ಉತ್ತರ ಕಾಕಸಸ್‌ನಿಂದ ಹಿಡಿದು ಟ್ರಾನ್ಸ್ ಬೈಕಾಲಿಯಾವರೆಗಿನ ಪ್ರದೇಶಗಳಲ್ಲಿ ಮತ್ತು 50 °N ನಷ್ಟು ಉತ್ತರದವರೆಗೂ ಕಂಡುಬರುತ್ತೆ. ಕೊರ್ಸಾಕ್‌ಗಳು ಇಲ್ಲಿ ಹೆಗ್ಗಣಗಳನ್ನು ನಿರ್ಮೂಲ ಮಾಡಲು ಉಪಯುಕ್ತವಾದವು."

ಈ ಉಪಯುಕ್ತ ಕಾರ್ಯ ನಿರ್ವಹಿಸುತ್ತಿರುವುದಕ್ಕೆ ಕೃತಜ್ಞತಾಪೂರ್ವಕವಾಗಿ ಮಾನವಕುಲ ಈ ಕೊರ್ಸಾಕ್‌ಗಳನ್ನು ನಿರ್ದಯದಿಂದ ನಿರ್ಮೂಲ ಮಾಡುತ್ತಿದೆ. ಏಕೆಂದರೆ, ವಿಶ್ವಕೋಶವೇ ವಿವರಿಸುವಂತೆ, ಇವು "ಅತ್ಯಂತ ಸೊಗಸಾದ ಹಸಿಚಕ್ಕಳ ಒದಗಿಸುತ್ತವೆ."

...ಸರಿ, ಹೇಗೋ ಅಂತೂ ನಾನು ನನ್ನ ಸ್ವಂತ ಕೊರ್ಸಾಕ್‌ಅನ್ನು ನನ್ನ ಕೈಗಳಲ್ಲಿ ಹಿಡಿದಿದ್ದೆ. ಅದನ್ನು ನನಗೆ ಮಾರಿದ, ಭಯಭೀತನಂತೆ ಕಂಡುಬಂದ, ಬಾಲಕ ನಾನು ಕೊಟ್ಟ ಹತ್ತು ರೂಬಲ್‌ಗಳ ನೋಟನ್ನು ಜೇಬಿನಲ್ಲಿರಿಸಿಕೊಂಡ (ಬೆಲೆ ಹೆಚ್ಚೇನಲ್ಲ, ಅಲ್ಲವೇ ?).

ಇದನ್ನು ಕೊಂಡುದರಿಂದಾಗಿ ಮುಂದೆ ಏನೇನು ತೊಡಕುಗಳು ಬರಬಹುದಿದ್ದವೋ, ನನಗೆ ಚೆನ್ನಾಗಿ ಗೊತ್ತಿತ್ತು. ಕಾಡಿನಲ್ಲಿ ಸ್ವಚ್ಛಂದವಾಗಿರುತ್ತಿದ್ದ ಪ್ರಾಣಿಯೊಂದನ್ನು ಆ ಅನಾಗರಿಕ ಜಗತ್ತಿನಿಂದ ಈ ನಾಗರಿಕ ಜಗತ್ತಿಗೆ ತಂದಾಗ ಅದನ್ನು ಗೂಡಿನಲ್ಲಿ ಬಂಧನದಲ್ಲಿರಿಸದಿದ್ದಲ್ಲಿ ಅನಿವಾರ್ಯವಾಗಿಯೇ ಉಂಟಾಗುವ ಮತ್ತು ಹೆಚ್ಚಾಗುತ್ತ ಹೋಗುವ ಸಂಘಟನೆಯ ತೊಂದರೆಗಳನ್ನಲ್ಲ ನಾನು ಹೇಳುವುದು. ತಂದ ಮೇಲೆ ಅದನ್ನು ಜಾಗರೂಕತೆಯಿಂದ ಪಾಲಿಸಿ ಪೋಷಿಸುವ ವೈಯಕ್ತಿಕ ಜವಾಬ್ದಾರಿಕೆಯ ಹಗಲೂ ರಾತ್ರಿ ಕಾಡುವ ಮರ್ಮವೇಧಕ ಭಾವನೆಯೂ ಅಲ್ಲ, "ನೀನು ಸ್ನೇಹ ಮಾಡಿದವರ ಬಗೆಗೆ ಜವಾಬ್ದಾರಿ ನಿನ್ನದೇ..." ಎಂಬ ಭಾವನೆಯೂ ಅಲ್ಲ ನನ್ನ ಮನಸ್ಸಿನಲ್ಲಿರುವುದು.

ಇಂಥ ವಿಷಯಗಳಲ್ಲೆಲ್ಲ ತುಂಬ ಕೆಟ್ಟುದೆಂದರೆ, ಕಾಡು ಪ್ರಾಣಿಗಳೊಂದಿಗೆ ನಮ್ಮ ಸಂಬಂಧ ಬಹುಮಟ್ಟಿಗೆ ಯಾವತ್ತೂ ದುರಂತದಲ್ಲೇ ಕೊನೆಗಾಣುತ್ತೆ, ಎಂಬುದಾಗಿದೆ.

ಕಾಡು ಜಗತ್ತು ಅದರ ನಿಯಮಗಳನ್ನು ಉಲ್ಲಂಘಿಸಿದವರ ಮೇಲೆ ಯಾವತ್ತೂ ಸೇಡು ತೀರಿಸಿಕೊಳ್ಳುತ್ತದೆ.

ಆ ಪ್ರಾಣಿಯನ್ನು ಯಾವ ಹೆಸರಿನಿಂದ ಕರೆಯುತ್ತಾನೆ, ಅದನ್ನು ಎಲ್ಲಿಂದ ತಂದಿದ್ದ, ಅದಕ್ಕೆ ಯಾವ ಆಹಾರ ಕೊಡಬೇಕು, ಎಂದೆಲ್ಲ ನಾನು ಆ ಹುಡುಗನನ್ನು ಕೇಳಬೇಕೆಂದಿದ್ದೆ. ಏಕೆಂದರೆ ನಾನು ಅದಕ್ಕೆ ಇಲ್ಲಿ ಆಹಾರವಾಗಿ ಹೆಗ್ಗಣಗಳನ್ನು ಒದಗಿಸುವುದು ಸಾಧ್ಯವಿರ ಲಿಲ್ಲವಷ್ಟೆ. ಆದರೆ ಆ ಹೊತ್ತಿಗೆ ಸರಿಯಾಗಿ ಅಲ್ಯೋನ ನನ್ನ ಬಳಿಗೆ ಬಿರುಗಾಳಿಯಂತೆ ಬಂದಳು. ನಾವು ಯಾವ ನಾಯಿಯ ಸಲುವಾಗಿ ಆ ಮಾರುಕಟ್ಟೆಗೆ ಬಂದಿದ್ದೆವೋ ಆ ನಾಯಿ ಅವಳ ಜೊತೆಯಲ್ಲಿದ್ದಿತು. ಆ ನಾಯಿ, ವಿಚಿತ್ರವೆನ್ನುವಂತೆ, ನಿಜಕ್ಕೂ ಅಲ್ಸೇಷಿಯನ್ ಜಾತಿಯದಾಗಿತ್ತು. ಅದರ ಕಣ್ಣುಗಳಲ್ಲಿ ಶಕ್ತಿಗುಂದಿದ ಹತಾಶೆಯ ನೋಟವಿದ್ದಿತು. ಕೊನೆಗೂ ಒಬ್ಬ “ಕೊಳ್ಳುವವನನ್ನು” ಕಂಡುಕೊಂಡಿದ್ದುದರಿಂದ ಅದು ಅಮಿತಾನಂದದಿಂದ ನನ್ನ ಮಗಳನ್ನೇ ಅವಳ ಹಿಮ್ಮಡಿಗೆ ಅಂಟಿಕೊಂಡಿದ್ದಿತೇನೋ ಅನ್ನುವಂತೆ ಅನುಸರಿಸಿ ಕೊಂಡು ಬಂದಿದ್ದಿತು. ಅಲ್ಲೇ ನಾವು ಅದಕ್ಕೆ “ಸೌಮ್ಯ” ಅಥವಾ “ಸೋಮಿ” ಎಂದೂ, ನರಿಗೆ “ಅಲೀಸ” ಅಥವಾ “ಅಲೀಸ್ಕ” ಎಂದೂ, ಹೆಸರಿಟ್ಟೆವು.

ಈ ಮಧ್ಯೆ ಅಲೀಸ್ಕದ ಮಾಜಿ ಮಾಲೀಕ ಆಗಲೇ ಕಣ್ಮರೆಯಾಗಿದ್ದ.

ಹಾಗಾಗಿ ಈ ಪ್ರಾಣಿ ಮಾಸ್ಕೋಗೆ ಹೇಗೆ ಬಂದಿದ್ದಿತು ಅನ್ನುವುದೇ ನಮಗೆ ತಿಳಿಯಲಿಲ್ಲ. ಯಾವುದೋ ಅಜ್ಞಾತ ಜಗತ್ತಿನಿಂದ, ಬಾಲ್ಯದ ಅರೆಮರೆತ ಕಥೆಗಳ ಜಗತ್ತಿನಿಂದ ತನ್ನ ಸಣಕಲಾದ ನೀಳವಾದ ಕಾಲುಗಳ ಮೇಲೆ ನಡೆದು ಬಂದಿದ್ದಿ ತೆಂದೇ ಊಹಿಸಿಕೊಳ್ಳಬಹುದಿತ್ತು.

ನಡುಗುತ್ತಿದ್ದ ಅಲೀಸ್ಕವನ್ನು ತೋಳುಗಳಲ್ಲಿ ಒತ್ತಿ ಹಿಡಿದುಕೊಂಡು ನಾನು ಜನರ ಗುಂಪುಗಳ ಮಧ್ಯೆ ನಡೆದು ಹೋದೆ. ಎಲ್ಲರೂ ನಮ್ಮನ್ನೇ ದಿಟ್ಟಿಸಿ ನೋಡುವವರೇ. ಯಾವುದೋ ಒಬ್ಬ ಪುಟ್ಟ ಹುಡುಗಿ ನನ್ನ ಹಿಂದೆಯೇ ಓಡೋಡಿ ಬರುತ್ತ “ಯಾಕೆ ಕೊಂಡಿರಿ, ಅಮ್ಮ, ನೀವು ಇದನ್ನು? ಒಳ್ಳೆಯ ತುಪ್ಪುಳದ ಕಾಲರ್ ಸಿಗುತ್ತದೆ ಅಂತಲೆ?” ಎಂದು ಮತ್ತೆ ಮತ್ತೆ ಕೇಳುತ್ತಿದ್ದಳು.

*

ಅಲ್ಯೋನ ಚೆನ್ನಾಗಿ ಬೇಯಿಸಿದ ಒಂದು ಕೋಳಿಯ ಕಾಲನ್ನು ಅಲಮಾರುವಿನ ಕೆಳಗೆ ತೂರಿಸಿದಳು. ಅಲೀಸ್ಕಕ್ಕೆ ಏನು ರುಚಿಸುತ್ತೆ ಅನ್ನುವುದು ನಮಗೆ ತಿಳಿದಿರದಿದ್ದರೂ ಅದು ಶಾಖಾಹಾರಿಯಂತೂ ಅಲ್ಲ ಅನ್ನುವುದು ಖಚಿತವಾಗಿದ್ದಿತು.

ತುಸು ಸಮಯದಲ್ಲೇ ನಮಗೆ ಮೂಳೆಗಳನ್ನು ಕಡಿದು ತಿನ್ನುವ ಸದ್ದು ಕೇಳಿಸಿತು. ನನ್ನ ಮಗಳು ಅಲಮಾರಿನ ಕೆಳಗೆ ಬಗ್ಗಿ ನೋಡಿದಳು. ಕಚಕಚ ಕಡಿಯುವ ಸದ್ದು ತಕ್ಷಣವೇ ಕೆಮ್ಮಿನಂಥ ಸದ್ದಿಗೆ ಬದಲಿತು. ಅಲೀಸ್ಕ ಮೂಳೆ ಕಡಿದು ತಿನ್ನುವಾಗ ಎಲ್ಲಾದರೂ ಉಸಿರು ಸಿಕ್ಕಿಸಿಕೊಂಡಿದ್ದಿತೇ ಎಂದು ನಮಗೆ ಭಯವಾಯಿತು. ಆದರೆ ಕೆಮ್ಮಿನ ಸದ್ದು ಸಾಮಾನ್ಯ ತೀವ್ರತೆಯ ಕೋಪವನ್ನು ಸೂಚಿಸುವ ಕೊರ್ಸಾಕ್ ಪ್ರಾಣಿಗಳ ವಿಧಾನವೆಂದು ನಾವು ಬೇಗನೆಯೇ ಅರಿತೆವು.

ಕಾಡು ಪ್ರಾಣಿಯೊಂದು ಹೊಸದಾಗಿ ಬಂದಿದ್ದುದನ್ನು ವಾಸನೆಯಿಂದ ಅರಿತ ಮನೆಯ ಬೆಕ್ಕು ಕೆರಳಿ ತನ್ನ ಕೂದಲನ್ನೆಲ್ಲ ಕೆದರಿಕೊಂಡು ಕಕ್ಕಾಬಿಕ್ಕಿಯಾದಂತೆ ಕೋಣೆಯ ಒಳ ಬಂದಾಗ ಅಲೀಸ್ಕ ಮುನಿಸನ್ನು ವ್ಯಕ್ತಪಡಿಸುವ ತನ್ನ ಇನ್ನೊಂದು ವಿಧಾನವನ್ನು ನಮಗೆ ತೋರಿಸಿಕೊಟ್ಟಿತು.

ಬೆಕ್ಕು ಒಳ ಬಂದ ಕೂಡಲೇ ಅಲೀಸ್ಕ ಅಲಮಾರಿನ ಕೆಳಗಿನಿಂದ ಧಾವಿಸಿಕೊಂಡು ಹೊರಬಂದು ನಾಯಿಮರಿಯ ತಾರಕ ಸ್ವರದಲ್ಲಿ ಬೊಗಳ ತೊಡಗಿತು. ಇದು ಅತ್ಯಂತ ಉನ್ನತ ಪ್ರಮಾಣದ ಕೋಪ ವ್ಯಕ್ತಪಡಿಸುವ ಅದರ ವಿಧಾನ ಎಂದು ನಾವು ತಿಳಿದೆವು.

ಬೆಕ್ಕೂ ತನ್ನ ಬೆನ್ನನ್ನು ಒಂಟೆಯಂತೆ ಗೂನು ಮಾಡಿಕೊಂಡು ಪ್ರತೀಕಾರ ತೋರಿಸಿತು. ನಾನು ತಕ್ಷಣವೇ ಅದನ್ನು ಎತ್ತಿಕೊಂಡು ಕೋಣೆಯಿಂದ ಹೊರಹೋದೆ. ಅದು ಕೂದಲು ನಿಮಿರಿಸಿಕೊಂಡು ಕೋಪದಿಂದ ಉಗುಳು ಸಿಡಿಸುತ್ತಿತ್ತು.

ಸೋಮಿ ನಾಯಿಯನ್ನು ಪರಿಚಯ ಮಾಡಿಸಲೆಂದು ಕೋಣೆಯೊಳಕ್ಕೆ ಕರೆತಂದಾಗಲೂ ಅಲೀಸ್ಕ ಅದೇ ರೀತಿಯ ಸ್ವಾಗತ ನೀಡಿತು. ಮಾರುಕಟ್ಟೆಯಿಂದ ಮನೆಗೆ ಬರುವಾಗ ಈ ಎರಡು ಪ್ರಾಣಿಗಳೂ ಎಷ್ಟು ಭಾವಭರಿತವಾಗಿದ್ದವೆಂದರೆ ಒಂದು ಇನ್ನೊಂದನ್ನು ಗಮನಿಸಿಯೇ ಇರಲಿಲ್ಲ. ಆದರೆ ಇಲ್ಲಿ ಮನೆಯಲ್ಲಿ ಸಂಪೂರ್ಣ ಚಲನ ಸ್ವಾತಂತ್ರ್ಯ ದೊರೆತಾಗ

ಮತ್ತು ಮನೆಯ ವಿನ್ಯಾಸವನ್ನೆಲ್ಲ ಪರಿಶೋಧಿಸಿದನಂತರ ಅಲೀಸ್ಕ ಆ ಕೋಣೆ ತನ್ನ ಭೂಪ್ರದೇಶ ಎಂಬ ಭಾವನೆ ಪಡೆದುಕೊಂಡಿದ್ದಿತು. ಯಾವ ಕೆಡುಕನ್ನೂ ಮಾಡದಿದ್ದಂಥ ಸೋಮಿ ತನ್ನತ್ತ ಉದ್ರಿಕ್ತವಾಗಿ ಹೀಗೆ ಬೊಗಳುತ್ತಿದ್ದ ಆ ಪುಟ್ಟ ದುರಹಂಕಾರಿ ಪ್ರಾಣಿಯನ್ನೇ ಆಶ್ಚರ್ಯದಿಂದ ದಿಟ್ಟಿಸಿ ನೋಡುತ್ತ ನಿಂತಿತು. ಬೇಕಾದರೆ ಅದು ತನ್ನ ಪಾದದ ಒಂದೇ ಹೊಡೆತದಿಂದ ಆ ಪ್ರಾಣಿಯನ್ನು ಹೊಡೆದು ಕೆಡವಬಲ್ಲುದಿದ್ದಿತು. ಅಂತೂ ಪರಿಚಯ ಮಾಡಿಸುವ ಕೆಲಸ ಯಶಸ್ವಿಯಾಗಲಿಲ್ಲ. ನಾಯಿಯನ್ನೂ ಹೊರಕ್ಕೆ ಕರೆದೊಯ್ಯಬೇಕಾಯಿತು.

ತನ್ನ ಶತ್ರುಗಳ ಹಂಚಿಕೆಗಳನ್ನೆಲ್ಲ ನಿರರ್ಥಕಗೊಳಿಸಿದನಂತರ "ವಿಜೇತ" ಪೀಠೋಪಕರಣಗಳನ್ನು – ಪ್ರತಿಯೊಂದೂ ಕುರ್ಚಿ, ಪ್ರತಿಯೊಂದೂ ಆರಾಮಕುರ್ಚಿ, ಮೇಜಿನ ಕಾಲುಗಳನ್ನು – ಮೂಸಿ ನೋಡ ತೊಡಗಿತು. ಅನಂತರ ಕಿಟಕಿ ಬಳಿ ಇದ್ದ ಆರಾಮಕುರ್ಚಿಯೊಂದರ ಮೇಲೆ ಹಾರಿ ಕಿಟಕಿಯ ಚೌಕಟ್ಟಿಗೆ ಆತು ನಿಂತು, ಮಂಜಿನಿಂದ ಆವೃತವಾಗಿದ್ದ ಮಾಸ್ಕೋ ಅಂಗಳವನ್ನು ಮಹದಾಸಕ್ತಿಯಿಂದ ನೋಡಿತು. ಇದೇ ರೀತಿ ಆನಂತರದ ದಿನಗಳಲ್ಲೂ ಅದು ಇದೇ ವಿನ್ಯಾಸವನ್ನು ಹಲವಾರು ಬಾರಿ ಪುನರಾವರ್ತಿಸಿತು. ಕಿಟಕಿಯ ಆಚೆ ಇದ್ದಿತು ಸ್ವಾತಂತ್ರ್ಯ...

ನಾನು ಕುಂಭಕಲೆಯ ಪುಟ್ಟ ಆದರೆ ಆಳವಾದ ಧೂಪದಾನಿಯೊಂದಕ್ಕೆ ಸ್ವಲ್ಪ ಮಾಂಸದ ಸಾರು ಸುರಿದು ಅದನ್ನು ಅಲೀಸ್ಕಕ್ಕೆ ನೀಡಿದೆ. ಅದು ಅದನ್ನು ಮೂಸಿ ನೋಡಿತು. ಅನಂತರ ಅದರ ಬಗೆಗೆ ತನ್ನ ಮನೋಧರ್ಮವನ್ನು ಅತ್ಯಂತ ಸ್ಪಷ್ಟವಾಗಿ ಪ್ರದರ್ಶಿಸಿತು: ಧೂಪದಾನಿಯ ಮೇಲೆ ಕುಳಿತು ಗುರಿ ಇಟ್ಟು ಗುಂಡು ಹಾರಿಸುವವನಂತೆ ಕರಾರುವಾಕ್ಕಾಗಿ ಅದರೊಳಕ್ಕೆ ಮೂತ್ರಧಾರೆ ವಿಸರ್ಜಿಸಿತು. ನಾವು ದಂಗಾದೆವು. ಎಂಥ ವರ್ತನೆ ಇದರದು !

ನರಿಗಳು ತಮ್ಮ ಆಹಾರ ಕೂಡಿಡುವ ಸ್ಥಳಗಳನ್ನು ಹೀಗೆಯೇ ಗುರುತಿಸಿ ಇಟ್ಟುಕೊಳ್ಳುವುದು ಎಂದು ಅನಂತರ ನಾನು ತಿಳಿದೆ. ಆದರೆ ಕಾಡುಗಳಲ್ಲಿ ಮೊದಲು ಅವು ಆಹಾರವನ್ನು ನೆಲದಡಿ ಹುಗಿದಿಡುತ್ತವೆ. ಆದರೆ ಇಲ್ಲಿ ಅಲೀಸ್ಕ ಮೊದಲು ತನ್ನ ಆಹಾರವನ್ನು ಮಣ್ಣಿನಿಂದ ಮುಚ್ಚದೆ ಮುಂದಿನ ಕೆಲಸ ನೆರವೇರಿಸಿತ್ತು. ಹುಟ್ಟರಿವು...

ಆದರೆ ಇಲ್ಲಿ ಅಲೀಸ್ಕದ ಹಾಸ್ಯಪ್ರವೃತ್ತಿಯೂ ತನ್ನ ಪಾತ್ರ ನಿರ್ವಹಿಸಿದ್ದಿತೆಂದೇ

ನಾನು ಊಹಿಸುತ್ತೇನೆ. ಅನಂತರವೂ ಅದು ಅನೇಕ ಬಾರಿ ಈ "ಕೋಣೆಯೊಳಗಿನ ಮೂತ್ರಪಾತ್ರೆ"ಯ ಚಮತ್ಕಾರವನ್ನು ಪುನರಾವರ್ತಿಸಿತು – ಆದರೆ ನೀಡಲಾದ ಆಹಾರ ತನಗೆ ಇಷ್ಟವಾಗದಿದ್ದಾಗ ಮಾತ್ರ.

ರಾತ್ರಿಯಾದಾಗ ಅಲೀಸ್ಕ ತುಂಬ ಚುರುಕಾಗುತ್ತಿತ್ತು. ಕುರ್ಚಿಗಳ ಮೇಲೆ ಎಗರುತ್ತ ನೆಲದ ಮೇಲೆ ಜಿಗಿಯುತ್ತ ಕೋಣೆಯಲ್ಲೆಲ್ಲ ಅಳಿಲಿನಂತೆ ಓಡಾಡುತ್ತಿತ್ತು. ನಿಜ, ನರಿಗಳು ನಿಶಾಚರ ಪ್ರಾಣಿಗಳು. ಆದರೆ ನಾವು ನಿಶಾಚರರಲ್ಲವಲ್ಲ. ಆದ್ದರಿಂದ ರಾತ್ರಿ ವೇಳೆಯಲ್ಲಿ ಅದನ್ನು ಬಚ್ಚಲುಮನೆಯಲ್ಲಿ ಕೂಡಿ ಹಾಕಲು ನಿರ್ಧರಿಸಿದೆವು. ಆದರೆ ಇದು ಹೇಳಿ ದಷ್ಟು ಸುಲಭವೇನಾಗಿರಲಿಲ್ಲ.

ಇಡೀ ದಿನ ಊಟದ ಕೋಣೆಯ ಒಳ ಹೋಗುವಾಗಲೂ ಅದರಿಂದ ಹೊರ ಬರುವಾಗಲೂ ನಾವು ನಮ್ಮ ಹಿಂದೆ ಬಾಗಿಲನ್ನು ಬೇಗ ಮುಚ್ಚುತ್ತಿದ್ದೆವು – ಚುರುಕುಗಾಲಿನ ನರಿ ಎಲ್ಲಿ ಹಜಾರಕ್ಕೆ ನುಸುಳಿ ಬಂದು ಬಿಡುವುದೋ, ಅನಂತರ ಅಲ್ಲಿಂದ ಇತರ ಕೋಣೆ ಗಳಿಗೆ ಎಲ್ಲಿ ಹೋಗಿ ಬಿಡುವುದೋ ಎಂದು ಹೆದರಿ. ಒಂದು ಕೋಣೆ ಮೃಗಾಲಯದ ವಾಸನೆಯಿಂದ ಕೂಡಿದ್ದುದು ನಮಗೆ ಸಾಕಾಗಿತ್ತು.

ಆದರೆ ಅಲೀಸ್ಕ ಮನೆಯಲ್ಲೆಲ್ಲ ಅಡ್ಡಾಡಲು ಕಾತುರವಾಗಿತ್ತು. ನಿಜಕ್ಕೂ ನರಿ ಯೊಂದರ ಕುಯುಕ್ತಿ, ಛಲಗಾರಿಕೆ ಹಾಗೂ ಜಾಣತನದೊಂದಿಗೆ ಅದು ಇದನ್ನು ಮಾಡಲು ಪದೇಪದೇ ಪ್ರಯತ್ನಿಸಿತು.

ಆದರೆ ಊಟದ ಕೋಣೆಯಿಂದ ಹೊರಕ್ಕೆ ಹೋಗುವ ಬಾಗಿಲು ತೆರೆದೇ ಇರುವುದನ್ನು ಅದು ಕಂಡಾಗ ಅದನ್ನು ಹೊರಬರುವಂತೆ ಮಾಡುವುದು ತೀರ ಅಸಾಧ್ಯವಾಗಿತ್ತು.

ಅಂಥ ವೇಳೆಯಲ್ಲಿ ನಾನು ಒಂದು ದಾರಕ್ಕೆ ಒಂದು ತುಂಡು ಮಾಂಸ ಕಟ್ಟಿ, ಬೆಕ್ಕಿನ ಮರಿಯೊಂದಿಗೆ ಆಟವಾಡುವಂತೆ ಅಲೀಸ್ಕದೊಂದಿಗೆ ಆಟವಾಡುತ್ತ ಅದನ್ನು ಹಜಾರ ದೊಳಕ್ಕೆ ಬರುವಂತೆ ಮಾಡಲು ಯತ್ನಿಸುತ್ತಿದ್ದೆ. ಅದು ಹಜಾರದೊಳಕ್ಕೇನೋ ಬರು ತ್ತಿತ್ತು. ಆದರೆ ಅನಂತರ ಯಾರಾದರೂ ಊಟದ ಕೋಣೆಯ ಬಾಗಿಲು ಮುಚ್ಚಲು ಹೋದಾಗ ತಕ್ಷಣವೇ ಅದು ಊಟದ ಕೋಣೆಯ ಒಳಕ್ಕೆ ನುಸುಳಿ ಬಿಡುತ್ತಿತ್ತು. ಆಮೇಲೆ ಮತ್ತೆ ಅದನ್ನು ಹಿಡಿಯುವುದು ಸುಲಭವಾಗುತ್ತಿರಲಿಲ್ಲ. ಇದರಿಂದ ಮುದ ಗೊಂಡು ಸುಪ್ರೀತವಾಗುತ್ತಿತ್ತು. ಅದರ ಓರೆಯ "ಸೊಗಸುಗಾರಿಕೆ"ಯ ಕಣ್ಣುಗಳಲ್ಲಿ

ತುಂಟತನ ತುಳುಕುತ್ತಿತ್ತು. ಹಲ್ಲು ಕಿರಿಯುವಂತೆ ಅದರ ಬಾಯಿ ತೆರೆದಿರುತ್ತಿತ್ತು. ಸ್ಪಷ್ಟವಾಗಿಯೇ ಅದು ನಮ್ಮನ್ನು ಗೇಲಿ ಮಾಡುತ್ತಿದ್ದಿತು.

ಹೀಗೆ ನಾವು ಒಮ್ಮೊಮ್ಮೆ ಮುಂಜಾನೆ ಎರಡು ಗಂಟೆಯವರೆಗೂ ಅಲೀಸ್ಕದೊಂದಿಗೆ "ಚಕ್ಕಂದ" ಆಡಬೇಕಾಗುತ್ತಿತ್ತು. ಮನೆಯಲ್ಲಿದ್ದ ಎಲ್ಲರ ಎಂಜಿನಿಯರಿಂಗ್ ಕೌಶಲ್ಯವನ್ನೂ ಕೂಡಿ ಹಾಕಿ ಒಂದು ತೊಡಕಾದ ಸನ್ನಾಹವನ್ನೂ ನಿರ್ಮಿಸಿದೆವು. ಅದರಲ್ಲಿ ಒಂದು ಹಗ್ಗವಿತ್ತು. ಅದರ ಒಂದು ತುದಿ ಅಲ್ಯೋನಳ ಕೈಯಲ್ಲಿತ್ತು. ಇನ್ನೊಂದು ತುದಿ ಬಾಗಿಲ ಹಿಡಿಗೆ ಕಟ್ಟಲಾಗಿತ್ತು. ಈ ಸನ್ನಾಹವೂ ಕೂಡಲೇ ಸಫಲವಾಗಲಿಲ್ಲ. ಅಲ್ಯೋನಳು ಹಗ್ಗವನ್ನು ಎಳೆದು ಬಾಗಿಲು ಮುಚ್ಚುವುದಕ್ಕೆ ಮುನ್ನವೇ ಅಲೀಸ್ಕ ಊಟದ ಕೋಣೆಯೊಳಕ್ಕೆ ಹೋಗಿ ಸೇರಿಕೊಂಡು ಬಿಡುತ್ತಿತ್ತು.

ಆದರೂ ಕೊನೆಗೆ ಈ ತಂತ್ರ ಕೆಲಸ ಮಾಡಿತು. ಬಹುಶಃ ಅಲೀಸ್ಕವೇ ಈ ಆಟದಿಂದ ಬೇಸರಗೊಂಡಿದ್ದಿತೇನೋ. ಹೇಗೋ ಅಂತೂ ಅದನ್ನು ಬಚ್ಚಲಮನೆಯ ಒಳಗೆ ನೆಲೆಗೊಳಿಸಲಾಯಿತು.

ಈ ಸಾಹಸ ಕಾರ್ಯದಿಂದ ಭಾವೋದ್ರಿಕ್ತಳಾದ ನನಗೆ ನಿದ್ರೆಯೇ ಬರಲಿಲ್ಲ. ನಿದ್ರೆಯ ಗುಳಿಗೆ ನುಂಗಿ ಮಲಗಬೇಕಾಯಿತು.

ಇನ್ನೇನು ನಿದ್ರೆ ಹತ್ತಿತ್ತು, ಆಗ ಏನೋ ಒಡೆದ ಭಯಂಕರವಾದ ಸದ್ದು ಕೇಳಿಬಂದಿತು.

ನಾನು ಜಿಗಿದೆದ್ದು ಬಚ್ಚಲುಮನೆಗೆ ಓಡಿದೆ. ಅಲ್ಲಿ ನಾನು ಕಂಡ ದೃಶ್ಯ ಅನಿರೀಕ್ಷಿತವಾಗಿತ್ತು, ತಬ್ಬಿಬ್ಬುಗೊಳಿಸುವಂತಿತ್ತು. ಸ್ನಾನದ ತೊಟ್ಟಿಯಲ್ಲಿ ಹಿಂಗಾಲುಗಳ ಮೇಲೆ ನಿಂತು ಅಲೀಸ್ಕ ತನ್ನ ಮುಂಗಾಲುಗಳಿಂದ ಗಾಜಿನ ಷೆಲ್ಫ್‌ನಲ್ಲಿದ್ದ ಎಲ್ಲವನ್ನೂ – ಹಲ್ಲುಜ್ಜುವ ಬ್ರಷ್‌ಗಳಿದ್ದ ಗಾಜಿನ ಲೋಟ, ಹಲ್ಲು ಪುಡಿ ಪೊಟ್ಟಣ, ಸಾಬೂನು, ಷಾಂಪೂ, ಯೂ-ಡಿ-ಕಲೋನ್, ಕ್ರೀಮ್‌ನ ಡಬ್ಬಿಗಳು, ಎಲ್ಲವನ್ನೂ – ತಳ್ಳಿ ಬೀಳಿಸುತ್ತಿತ್ತು. ಇವೆಲ್ಲವೂ ನೀರಿನ ತೊಟ್ಟಿಯೊಳಕ್ಕೆ ಇಲ್ಲವೇ ನೆಲದ ಮೇಲಕ್ಕೆ ಬಿದ್ದು ಚೂರು ಚೂರಾಗುತ್ತಿದ್ದವು, ಹಳ್ಳ ಕೂಡುತ್ತಿದ್ದವು ಇಲ್ಲವೇ ನೆಲದ ಮೇಲೆಲ್ಲ ಹರಡುತ್ತಿದ್ದವು.

ನಾನು ಒಳ ಹೊಕ್ಕಾಗ ನರಿ ನಿಧಾನವಾಗಿ ನನ್ನ ಕಡೆಗೆ ತಿರುಗಿತು. ಅದರ ಮೂತಿಗೆ ಹಲ್ಲುಪುಡಿ ಮೆತ್ತಿಕೊಂಡಿತ್ತು. ಬಾಯಿ ತೆರೆದಿತ್ತು, ಹಲ್ಲು ಕಿರಿಯುತ್ತಿರುವಂತೆ.

ನಾನು ಕೆಳಗೆ ಬಿದ್ದುದನ್ನೆಲ್ಲ ಎತ್ತಿ ಹಾಕಿ ಶುಭ್ರಗೊಳಿಸಿದೆ. ಬಚ್ಚಲುಮನೆಯಲ್ಲಿ

ತೆಗೆದು ಹಾಕಬಹುದಾಗಿದ್ದವನ್ನೆಲ್ಲ ಅಲ್ಲಿಂದ ಬೇರೆ ಕಡೆಗೆ ತೆಗೆದಿರಿಸಿ, ಇನ್ನೆರಡು ನಿದ್ರೆ ಗುಳಿಗೆಗಳನ್ನು ನುಂಗಿ ಹಾಸಿಗೆಯ ಮೇಲೆ ಉರುಳಿದೆ – ಅಲೀಸ್ಕಕ್ಕೆ ಶಬ್ದ ಮಾಡಲು ಬಚ್ಚಲುಮನೆಯಲ್ಲಿ ಯಾವ ವಸ್ತುಗಳೂ ಉಳಿದಿಲ್ಲ ಎಂಬ ತಿಳಿವಿನಿಂದ ಸಂತೋಷ ಗೊಂಡು.

ಆದರೆ ನನ್ನ ದುರದೃಷ್ಟ – ನನ್ನ ಸಂತೋಷವೂ ನಿದ್ರೆಯೂ ಅಲ್ಪಾಯುವಾಗಿದ್ದವು. ನರಿಯೊಂದರ ಕಲ್ಪನಾಚಾತುರ್ಯವನ್ನು ನಾನು ಪೂರ್ತಿಯಾಗಿ ಅಂದಾಜು ಮಾಡಿ ರಲಿಲ್ಲ.

ಏನೋ ವಿಚಿತ್ರ ರೀತಿಯ ಕೆರೆತದ ಸದ್ದು ನನ್ನನ್ನು ಎಚ್ಚರಗೊಳಿಸಿತು. ನಾನು ಎದ್ದು ನರಿಯನ್ನು ಶಪಿಸುತ್ತ ಬಚ್ಚಲುಮನೆಗೆ ಹೋಗಿ ನೋಡಿದೆ. ಸಣ್ಣ ಮಕ್ಕಳು ಮಂಜಿನ ಗುಡ್ಡದ ಮೇಲಿನಿಂದ ಕೆಳಕ್ಕೆ ಜಾರಿಕೊಂಡು ಬರುವಂತೆ ಈ ನರಿ ಸ್ನಾನದ ತೊಟ್ಟಿಯ ಅಂಚಿನಿಂದ ಕೆಳಕ್ಕೆ ಜಾರುತ್ತ ಆಟವಾಡುತ್ತಿತ್ತು. ಜಾರುವಾಗ ಈ "ಮಗು" ತನ್ನ ಉಗುರುಗಳನ್ನು ಒಂದು ರೀತಿಯ "ಬ್ರೇಕ್" ಆಗಿ ಉಪಯೋಗಿಸುತ್ತಿತ್ತು. ಅದರದೇ ನನ್ನನ್ನು ಎಚ್ಚರಗೊಳಿಸಿದ ಆ ಕರಕರ ಸದ್ದು.

ಅಲೀಸ್ಕ ಹೀಗೆಯೇ ಬೆಳಗಿನವರೆಗೂ ಜಾರಾಟ ಆಡುತ್ತಲೇ ಇರುವುದೆಂಬುದು ಸ್ಪಷ್ಟವಾಗಿತ್ತು. ಇಲ್ಲವೇ ಅದು ಇನ್ನೇನಾದರೂ ವಿನೋದ ಕ್ರೀಡೆಯನ್ನು ಆವಿಷ್ಕರಿಸು ವುದಿದ್ದಿತು. ಬೆಳಗಾದ ಮೇಲಷ್ಟೆ "ಅದರ" ರಾತ್ರಿ ಪ್ರಾರಂಭವಾಗುತ್ತಿದ್ದುದು...

*

ಅಲೀಸ್ಕ ನಮ್ಮ ಮನೆಗೆ ಬಂದು ಎರಡು ದಿನಗಳಾಗಿದ್ದವಷ್ಟೆ. ಆಗ ಅದರ ಆರೋಗ್ಯ ದಲ್ಲಿ ಸ್ವಲ್ಪ ಏರುಪೇರಾದುದನ್ನು ನಾನು ಗಮನಿಸಿದೆ. ಅದು ಹಾಸಿಗೆಯನ್ನು ಬಿಟ್ಟು (ತುಂಬ ಸೆಖೆಯೆಂದೋ ಏನೋ) ತಣ್ಣಗಿನ ಚದರಬಿಲ್ಲೆಯ ನೆಲದ ಮೇಲೆ ಮಲಗುತ್ತಿ ದ್ದಿತು. ಮೃದುವಾಗಿ ನರಳುವ ಶಬ್ದ ಮಾಡುತ್ತಿತ್ತು. ಅದರ ಉಸಿರಾಟ ಜೋರಾಗಿತ್ತು. ಅದರ ಮೂಗು ಒಣಗಿ ಬಿಸಿಯಾಗಿತ್ತು.

ನಾನು ಅದನ್ನು ಪಶುವೈದ್ಯರ ಬಳಿಗೆ ಕರೆದೊಯ್ದೆ. ಕೂಡಲೇ ಎಲ್ಲರ ಗಮನವೂ

ಅದರ ಕಡೆಗೇ ತಿರುಗಿತು. ಭವ್ಯವಾದ ಅಮೃತಶಿಲೆ ಬಣ್ಣದ ಗ್ರೇಟ್ ಡೇನ್ ನಾಯಿಯೂ ತನ್ನೆಲ್ಲ ಮೆಚ್ಚಿಗೆಗಾರರನ್ನೂ ಕಳೆದುಕೊಂಡಿದ್ದಿತು.

ಆದರೆ ಅಲೀಸ್ಕಕ್ಕೆ ಈ ತನ್ನ ಅಮೋಘ ಯಶಸ್ಸಿನ ಬಗೆಗೆ ನಿರ್ಲಕ್ಷ್ಯ. ಅದಕ್ಕೆ ನಿಜಕ್ಕೂ ಮೈ ತುಂಬ ಚೆನ್ನಾಗಿರಲಿಲ್ಲ. ನಮಗೆ "ಕ್ಯೂ"ನಲ್ಲಿ ನಿಲ್ಲದೆ ಮುಂದೆ ಹೋಗಲು ಅವಕಾಶ ನೀಡಲಾಯಿತು. ವೈದ್ಯರ ಕೋಣೆಯೊಳಗೆ ಒಬ್ಬ ಮುದುಕಿ ಇದ್ದಳು. ಅವಳು ತನ್ನ ಮುದ್ದಿನ ಬೆಕ್ಕನ್ನು ಮಡಿಲಿನಲ್ಲಿ ಇಟ್ಟುಕೊಂಡಿದ್ದಳು. ಅದು ವಲೇರಿಯನ್ ಮದ್ದಿನ ಹನಿಗಳನ್ನು ಕುಡಿಯುವಾಗ ಫ್ಲಾಸ್ಕಿನ ಬಿರಡೆಯನ್ನೂ ನುಂಗಿ ಬಿಟ್ಟು ಉಸಿರಾಟಕ್ಕೆ ತೊಂದರೆ ಮಾಡಿಕೊಂಡಿದ್ದಿತು. ಅದರ ಒಡತಿ ಮುದುಕಿಯ ಕಣ್ಣುಗಳಲ್ಲಿ ನೀರು ತುಂಬಿತ್ತು. ಅವಳ ಸರದಿ ಮುಗಿದನಂತರ ನಾನು ಅಲೀಸ್ಕದೊಂದಿಗೆ ಒಳ ಹೋದೆ.

ನಡುಗುತ್ತಿದ್ದ ಆ ರೋಗಿಗೆ ಅವರು ನೀಡಿದ ಮೊದಲ ಚಿಕಿತ್ಸೆ ಎಂದರೆ ಅದರ ಬಾಲದ ಕೆಳಗೆ ಒಂದು ಉಷ್ಣಮಾಪಿಯನ್ನು ತೂರಿಸಿದುದು. ಅದರ ಮೈ ಶಾಖ 44.5°C ಆಗಿತ್ತು. ಸಾಮಾನ್ಯವಾಗಿ ಪ್ರಾಣಿಗಳ ಮೈ ಶಾಖ ಮನುಷ್ಯರ ಮೈ ಶಾಖಕ್ಕಿಂತ ಹೆಚ್ಚಾಗಿರುತ್ತೆ. ಆದರೆ ಇದು ತೀರ ಹೆಚ್ಚಾಗಿದ್ದಿತು.

ಆಮೇಲೆ ವೈದ್ಯರು ಅಲೀಸ್ಕದ ಕೂಲಂಕಷ ವೈದ್ಯ ಪರೀಕ್ಷೆ ಮಾಡಿ ಅದಕ್ಕೆ ಎರಡು ಪಕ್ಕಗಳಲ್ಲೂ ನ್ಯೂಮೋನಿಯಾ ಆಗಿದೆಯೆಂದು ಘೋಷಿಸಿದರು.

ಅಲೀಸ್ಕ ಆ ಮಾರುಕಟ್ಟೆಯಲ್ಲಿ ಅಷ್ಟು ಹೊತ್ತು ಚಲನೆಯಿಲ್ಲದೆ ಮಂಜಿನ ಮೇಲೆ ಕುಳಿತುಕೊಂಡಿದ್ದಾಗ, ಚಿತ್ತಕ್ಷೋಭೆಯಿಂದ ಬಾಯಿ ತೆರೆದುಕೊಂಡು ಹಿಮ ಶೀತದ ಗಾಳಿಯನ್ನು ಸೇವಿಸಿದ್ದುದರಿಂದಾಗಿ ಅದಕ್ಕೆ ಈ ರೋಗ ತಗುಲಿದ್ದಿರಬೇಕು.

"ಇದರ ಆರೋಗ್ಯ ತುಂಬ ಕೆಟ್ಟಿದೆ" ಎಂದರು ಪಶುವೈದ್ಯರು. "ಸೂಜಿಮದ್ದು ಕೊಡಬಹುದು. ಆದರೆ ಇದು ಕಾಡುಪ್ರಾಣಿ. ಇದಕ್ಕೆ ಆಘಾತ ಆಗುತ್ತೆ. ಆದ್ದರಿಂದ ಗುಳಿಗೆಗಳನ್ನು ಕೊಟ್ಟು ನೋಡೋಣ. ಇದರ ಹೆಸರೇನು?"

"ಅಲೀಸ್ಕ."

"ಕುಟುಂಬ ನಾಮ?"

"ಏನು ನೀವು ಕೇಳೋದು?"

"ನಿಮ್ಮ ಕುಟುಂಬ ನಾಮ?" ಪಶುವೈದ್ಯರು ತಾಳ್ಮೆಗೆಟ್ಟು ಕೇಳಿದರು.

ನಾನು ನನ್ನ ಹೆಸರು ಕೊಟ್ಟೆ. ಅವರು ಔಷಧಿ ಚೀಟಿ ಬರೆದು ಕೊಟ್ಟರು. ಮನೆಗೆ ಬರುವಾಗ ಔಷಧದ ಅಂಗಡಿಗೆ ಹೋಗಿ ವೈದ್ಯರು ಬರೆದು ಕೊಟ್ಟಿದ್ದ ಚೀಟಿಯನ್ನು ಬಿಚ್ಚಿ ನೋಡಿದೆ. ಅದರಲ್ಲಿ ಬರೆದಿತ್ತು: "ಅಲೀಸ್ಕ ದ್ರೂನಿನ, ಹೆಣ್ಣು ನರಿಗೆ."

ಆ ಕಹಿ ಗುಳಿಗೆಗಳನ್ನು ಅಲೀಸ್ಕ ನುಂಗುವಂತೆ ಮಾಡುವುದು ಮುಂದಿನ ಸಮಸ್ಯೆಯಾಗಿತ್ತು. ದಿನಕ್ಕೆ ಮೂರು ಬಾರಿ ನರಿಯೊಂದರ ಚಾತುರ್ಯವನ್ನು ಮೀರಿಸುವುದು ಬಹು ಪ್ರಯಾಸದ ಕಾರ್ಯಭಾರವೇ !

ನಾನು ಕಚ್ಚಾ ಯಕೃತ್ತಿನ ತುಂಡೊಂದರಲ್ಲಿ ಗುಳಿಗೆಯನ್ನು ತೂರಿಸಿ ಅಲೀಸ್ಕಕ್ಕೆ ಕೊಟ್ಟೆ. ಮೊದಲ ಬಾರಿ ಯಶಸ್ವಿಯಾಯಿತು – ಅಲೀಸ್ಕ ಆ ಯಕೃತ್ತಿನ ತುಂಡನ್ನೂ ಗುಳಿಗೆಯನ್ನೂ ಒಟ್ಟಿಗೇ ನುಂಗಿತು. ಆದರೆ ನುಂಗಿದ ನಂತರ ಗೊಂದಲಕ್ಕೊಳಗಾದಂತೆ, ಅಸಂತುಷ್ಟಗೊಂಡಂತೆ ಕಂಡುಬಂದಿತು – "ಅದರೊಳಗೆ ಏನದು ಆ ಕೆಟ್ಟ ಪದಾರ್ಥವನ್ನು ಹುದುಗಿಸಿಟ್ಟದ್ದು ?" ಎಂದು ಕೇಳುವಂತೆ.

ಎರಡನೆಯ ಬಾರಿ ಅಲೀಸ್ಕ ಯಕೃತ್ತನ್ನೇನೋ ತಿಂದಿತು, ಆದರೆ ಗುಳಿಗೆಯನ್ನು ಹಾಗೇ ಉಳಿಸಿತು.

ಮೂರನೆಯ ಬಾರಿ ಏನನ್ನು ತಿನ್ನಲೂ ನಿರಾಕರಿಸಿತು.

ಮತ್ತೆ ಮಗ್ಗುಲು ಬಿದ್ದುಕೊಂಡು ಮೃದುವಾಗಿ ನರಳುತ್ತಿತ್ತು, ಕೆಟ್ಟ ಚಾಳಿಗಳನ್ನು ಇನ್ನೂ ಕಲಿಯದಿದ್ದ ಗಲಾಟೆ ಮಾಡದ ಮಗುವಿನಂತೆ. ಒಮ್ಮೆ ತುಪ್ಪುಳದಿಂದ ತುಂಬಿ ಎಗರಾಡುತ್ತಿದ್ದ ಅದರ ಬಾಲ ಈಗ ಕಾಲುಗಳ ಮಧ್ಯೆ ತೂರಿಕೊಂಡಿತ್ತು.

ಗುಳಿಗೆಗಳನ್ನು ನುಂಗುವಂತೆ ಅಲೀಸ್ಕವನ್ನು ಬಲಾತ್ಕರಿಸುವುದು ಇಳೆಯ ಮೇಲಿನ ಯಾವ ಶಕ್ತಿಗೂ ಸಾಧ್ಯವಿಲ್ಲವೆಂಬುದು ಸ್ಪಷ್ಟವಿದ್ದಿತು. ಮತ್ತೆ ಔಷಧಿ ತೆಗೆದುಕೊಳ್ಳದಿದ್ದರೆ ಅದು ಸಾಯುವುದು ಖಂಡಿತವಿದ್ದಿತು. ನಾನು ಮತ್ತೆ ಅದನ್ನು ಪಶುವೈದ್ಯರ ಬಳಿಗೆ ಕರೆದೊಯ್ದೆ.

"ಸರಿ. ಬೇರೆ ಏನೂ ಮಾಡಲು ಆಗುವುದಿಲ್ಲ. ಚುಚ್ಚುಮದ್ದನ್ನೇ ಕೊಟ್ಟು ನೋಡೋಣ" ಅವರೆಂದರು.

ನರ್ಸ್ ಅಲೀಸ್ಕದ ಹಿಂಗಾಲನ್ನು ಎಳೆದು ಹಿಡಿದುಕೊಂಡಳು. ವೈದ್ಯರು ದಪ್ಪ ಸೂಜಿ ಇರುವ ಸಿರೆಂಜ್ ತೆಗೆದುಕೊಂಡರು... ನಾನು ಉಸಿರು ಕಟ್ಟಿ ನೋಡುತ್ತ ನಿಂತೆ: ಅಲೀ

ಸ್ಯಕ್ಕೆ ಆಘಾತ ಆಗುವುದೆ? ಎಷ್ಟೇ ಆಗಲಿ ಅಲೀಸ್ಕ ಕಾಡು ಪ್ರಾಣಿ. ಆದರೆ ಎಲ್ಲ ಚೆನ್ನಾಗಿಯೇ ಆಯಿತು.

ಆಗಿನಿಂದ ಅಲೀಸ್ಕದ ಆರೋಗ್ಯ ಸುಧಾರಿಸ ತೊಡಗಿತು. ಆದರೆ ಅದಕ್ಕೆ ದಿನಕ್ಕೆ ಮೂರು ಬಾರಿ ಚುಚ್ಚುಮದ್ದು ಕೊಡಬೇಕಾಗಿತ್ತು. ಪ್ರತಿದಿನವೂ ಮೂರು ಬಾರಿ ಪಶು ವೈದ್ಯರಲ್ಲಿಗೆ ಅದನ್ನು ಕರೆದುಕೊಂಡು ಹೋಗಲು ನನಗೆ ಬಿಡುವಿರಲಿಲ್ಲ. ಆಗ ನನ್ನ ಪತಿ, ಸಿರೆಂಜ್‌ಅನ್ನು ಕೈಯಲ್ಲಿ ಎಂದೂ ಹಿಡಿದಿರದಿದ್ದ ನನ್ನ ಪತಿ, ಧೈರ್ಯದಿಂದ ನಿರ್ಧರಿಸಿದರು – ತಾವೇ ಅಲೀಸ್ಕಕ್ಕೆ ಚುಚ್ಚುಮದ್ದು ಕೊಡಲು ಮುಂದಾದರು.

ಸರಿ, ನಾನು ಕುರ್ಚಿಯ ಮೇಲೆ ಕುಳಿತೆ, ತನ್ನ ಕಣ್ಣುಗಳಲ್ಲಿ ಎಚ್ಚರಿಕೆ, ಸಂಶಯ ವ್ಯಕ್ತಪಡಿಸುತ್ತಿದ್ದ ಅಲೀಸ್ಕವನ್ನು ನನ್ನ ತೊಡೆಯ ಮೇಲೆ ಇರಿಸಿಕೊಂಡು. ನನ್ನ ಪತಿ ಅಲೆಕ್ಸೇಯ್ ಸಿರೆಂಜ್‌ಅನ್ನು ಮದ್ದಿನಿಂದ ತುಂಬಿ ಅಲೀಸ್ಕದ "X" ಆಕಾರದ ಹಿಂಗಾಲನ್ನು ಮೆಲ್ಲಗೆ ಹಿಂದಕ್ಕೆ ಎಳೆದು, ಅಯೊಡೀನ್ ಹಚ್ಚಿ, ದೃಢ ನಿರ್ಧಾರದಿಂದ ಸೂಜಿಯನ್ನು ಒಳಕ್ಕೆ ಚುಚ್ಚಿದರು. ಅಲೀಸ್ಕ ಮೈ ಕಂಪಿಸಿ ತನ್ನನ್ನು ಯಾರು ಹಿಂದಿನಿಂದ ದ್ರೋಹದಿಂದ "ಕಚ್ಚಿದ"ರೆಂಬುದನ್ನು ನೋಡಲು ಯತ್ನಿಸಿತು. ನನ್ನ ಪತಿ ಸಿರೆಂಜ್‌ನ ಪಿಸ್ಟನ್‌ಅನ್ನು ಒಳಕ್ಕೆ ತಳ್ಳಲು ಯತ್ನಿಸಿದರೆ ಅದು ಹೋಗುತ್ತಲೇ ಇಲ್ಲ. ಅಂದರೆ ಸೂಜಿಗೆ ಏನೋ ತಡೆಯಾಗಿದ್ದಿತು. ನಮ್ಮ "ವೈದ್ಯ"ರು ಗುಟುರು ಹಾಕಿ ಸೂಜಿಯನ್ನು ಹೊರ ತೆಗೆದರು. ಪುನಃ ಕಾಲನ್ನು ಹಿಂದಕ್ಕೆ ಎಳೆದುಕೊಂಡರು. ಆಗ ನಾನು ಗಮನಿಸಿದೆ ನನ್ನ ಬಲಗೈ ಅಲೀಸ್ಕದ ಬಾಯಿಯಲ್ಲಿದ್ದಿತೆಂದು! ಅಲೆಕ್ಸೇಯ್ ಮತ್ತೊಮ್ಮೆ ಚುಚ್ಚಿದರು. ಸ್ವಲ್ಪ ಕಾಲದ ಹಿಂದೆ ಅಲೀಸ್ಕ ಹೇಗೆ ಒಂದು ಕಬ್ಬಿಣದ ಸರಪಣಿಯನ್ನು ಅಗಿದುಹಾಕಿತ್ತೆಂಬುದನ್ನು ನೆನಸಿಕೊಂಡು ನಾನು ಕಣ್ಣು ಮುಚ್ಚಿ ಕುಳಿತೆ. ತನ್ನನ್ನು ಹೀಗೆ ಹಿಂಸಿಸುತ್ತಿರುವವರನ್ನು ಕಚ್ಚಬಾರದೇಕೆ? ಅದಕ್ಕೇನು ಗೊತ್ತು ನಾವು ಹಿಂಸಿಸುತ್ತಿರುವುದು ಅದರ ಒಳಿತಿಗಾಗಿಯೇ ಎಂದು?

ಆದರೆ ಯಾವುದೋ ಹುಟ್ಟರಿವು ಅದಕ್ಕೆ ಸರಿಯಾಗಿ ಇದನ್ನೇ ತಿಳಿಸಿದ್ದಿರಬೇಕು. ಅಥವಾ ಅದು ನನ್ನಲ್ಲಿ ಅಪಾರ ವಿಶ್ವಾಸ ಇರಿಸಿದ್ದಿತೇನೋ. ಏನೇ ಆಗಲಿ, ಅಲೆಕ್ಸೇಯ್ ಚುಚ್ಚುಮದ್ದು ನೀಡಿದಾಗ ಅದು ಕೇವಲ ತನ್ನ ಹಲ್ಲುಗಳನ್ನು ಸ್ವಲ್ಪ ಮಟ್ಟಿಗೆ ಬಿಗಿ ಹಿಡಿಯಿತಷ್ಟೆ.

ಈಗ ಅದು ಬಹು ಬೇಗ ಗುಣವಾಗ ತೊಡಗಿತು. ಅದರ ಆರೋಗ್ಯ ಸುಧಾರಿಸುತ್ತಿ

ತ್ತೆಂಬುದಕ್ಕೆ ಅನೇಕ ಸೂಚನೆಗಳು ಕಂಡುಬಂದವು. ಎಲ್ಲಕ್ಕಿಂತ ಅತ್ಯಂತ ಮನವೊಪ್ಪಿಸು ವಂಥ ಸೂಚನೆಯೆಂದರೆ ಅದು ತನ್ನ ಚೇಷ್ಟೆಗಳಿಗೆ ಹಿಂದಿರುಗಿದುದು. ಅದರ ಮೊದಲ ಚೇಷ್ಟೆಯೇ ಎಲ್ಲಾ ಸರಿಯಾಗಿದೆ ಎಂದು ನಮಗೆ ಸಂಪೂರ್ಣ ಖಾತರಿ ನೀಡಿತು.

"ಪಕ್ಷಿಗಳ ಮಾರುಕಟ್ಟೆ"ಯಲ್ಲಿ ಚಳಿಯಿಂದ ಹಾಗೂ ಭಯದಿಂದ ನಡುಗುತ್ತ ದುರವಸ್ಥೆಯಲ್ಲಿದ್ದ, ಯಾರಿಗೂ ಬೇಕಾಗಿರದಿದ್ದ ಪುಟ್ಟ ಪ್ರಾಣಿಯಿಂದ ಅಲೀಸ್ಕ ನಮ್ಮ ಮನೆ ಮಂದಿಯ ಅತ್ಯಂತ ಮುದ್ದಿನ ಪ್ರಾಣಿಯಾಗಲು, ನಮ್ಮ ಇಡೀ ಚಿಕ್ಕ ಕುಟುಂಬದ ಕಣ್ಮಣಿಯಾಗಲು ತೀರ ಅಲ್ಪ ಸಮಯವಷ್ಟೆ ಸಾಕಾಯಿತು.

ಮನೆಯಲ್ಲಿ ನಾವು ಒಬ್ಬೊಬ್ಬರೂ ಅದರ ವಿಶ್ವಾಸ ಪ್ರೀತಿಗೆ ಪಾತ್ರರಾಗಲು ಸ್ಪರ್ಧಿಸುತ್ತಿದ್ದೆವು. ನಾನು ಅದರ ಮೆಚ್ಚಿನ ವ್ಯಕ್ತಿಯಾಗಿದ್ದುದು ನನಗೆ ಅಪಾರ ಹೆಮ್ಮೆ ತಂದಿದ್ದಿತು.

ತನ್ನನ್ನು ಎತ್ತಿಕೊಳ್ಳಲು ಅದು ನನಗಷ್ಟೆ ಬಿಡುತ್ತಿತ್ತು. ಆಗಲೂ ಮೊದಲ ಕೆಲವು ಕ್ಷಣ ಅದು ನಡುಗುತ್ತಿತ್ತು, ಕಿವಿಗಳನ್ನು ಮಟ್ಟಸ ಮಾಡಿಕೊಳ್ಳುತ್ತಿತ್ತು. ಬಹುಶಃ ಅಂಥ ಸಮಯದಲ್ಲಿ ಅದರ ಅಂತರಂಗದಲ್ಲಿ ಕಾಡು ಮೃಗವೊಂದರ ಸಹಜ ಪ್ರವೃತ್ತಿಗೂ ಮಾನವ ವ್ಯಕ್ತಿಯೊಂದಿಗೆ ವಿಶ್ವಾಸ ಬೆಳೆಸಿಕೊಳ್ಳುವ ಪ್ರವೃತ್ತಿಗೂ ನಡುವೆ ಸೆಣಸಾಟ ಜರುಗುತ್ತಿದ್ದಿತೇನೋ.

ನಾನೊಬ್ಬಳಷ್ಟೆ ಅಲೀಸ್ಕಕ್ಕೆ ನನ್ನ ಕೈಯಿಂದಲೇ ಆಹಾರ ನೀಡುವ ಧೈರ್ಯ ಹೊಂದಿದ್ದುದು. ಅದು ಯಾವತ್ತೂ ನನ್ನ ಕೈಯಲ್ಲಿದ್ದ ಚೂರು ತಿನಿಸನ್ನು ಕೋಮಲವಾಗಿ ಎತ್ತಿಕೊಂಡು ತಿನ್ನುತ್ತಿದ್ದಿತು. ನನ್ನ ಬೆರಳುಗಳನ್ನು ಎಲ್ಲಿ ಕಚ್ಚಿಬಿಡುತ್ತದೋ ಎಂಬ ಭೀತಿ ನನಗೆ ಎಂದೂ ಇದ್ದಿರಲಿಲ್ಲ.

ಒಮ್ಮೆ ನನ್ನ ಪತಿ ಅಲೆಕ್ಸೇಯ್ ಕೂಡ ಕೈಯಿಂದಲೇ ಆಹಾರ ತಿನ್ನಿಸಲು ಯತ್ನಿಸಿದರು. ಒಂದು ತುಂಡು ಯಕೃತ್ತನ್ನು ಅದರ ಮುಂದೆ ಹಿಡಿದರು. ಅದು ಆಹಾರವನ್ನು ಸ್ವೀಕರಿಸಲೇನೋ ದೊಡ್ಡ ಮನಸ್ಸಿನಿಂದ ಒಪ್ಪಿಕೊಂಡಿತು. ಅದನ್ನು ನೆಲದ ಮೇಲಿರಿಸಿ ನಂತರ ಮಿಂಚಿನಷ್ಟೆ ವೇಗದಲ್ಲಿ ಅಲೆಕ್ಸೇಯ್‌ರತ್ತ ಮುನ್ನುಗ್ಗಿ ಅವರ ಬೆರಳನ್ನು ಸಾಂಕೇತಿಕವಾಗಿ ಹಿಡಿದಿತ್ತು. ತನ್ಮೂಲಕ ಸ್ಪಷ್ಟವಾಗಿ ತಿಳಿಸಿದ್ದಿತು: "ಲಂಚ ನೀಡಿ ನನ್ನನ್ನು ಒಲಿಸಿಕೊಳ್ಳಲು ಯತ್ನಿಸಬೇಡಿ. ನಿಮ್ಮ ಕೈ ಬೆರಳುಗಳ ಬಗೆಗೆ ಜತನ !" ಇದನ್ನು ಸ್ಪಷ್ಟಪಡಿಸಿದ ನಂತರ ಅದು ಯಕೃತ್ತನ್ನು ಘನತೆಯಿಂದ ತಿನ್ನ ತೊಡಗಿತು.

ನನ್ನ ಮಗಳನ್ನಂತೂ ಅಲೀಸ್ಕ ಭಯಭ್ರಾಂತಗೊಳಿಸಿದ್ದಿತು. ಯಾವಾಗಲೂ ಕಚ್ಚ ಲೆಂದು ಅವಳ ಕಾಲುಗಳ ಮೇಲೆಯೇ ಅದರ ಕಣ್ಣು. ಕೈಯಲ್ಲಿ ಪೊರಕೆಯ ಆಯುಧ ಹಿಡಿದು ಅಲ್ಯೋನ ಯಾವಾಗಲೂ ಮನೆಯಲ್ಲಿ ವಿನೋದವಾಗಿ ದೊಡ್ಡ ದೊಡ್ಡದಾಗಿ ಚಿಮ್ಮುತ್ತ ನೆಗೆಯುತ್ತ ಚಲಿಸುತ್ತಿದ್ದಳು. ಅನೇಕ ವೇಳೆ ನೆರವಿಗಾಗಿ ನನ್ನನ್ನು ಕೂಗಿ ಕರೆ ಯುತ್ತಿದ್ದುದೂ ಉಂಟು.

ಅಲೀಸ್ಕ ಯಾಕೆ ಅಲ್ಯೋನಳನ್ನು ಇಷ್ಟಪಡುತ್ತಿರಲಿಲ್ಲ? ಯಾರಿಗೆ ಗೊತ್ತು? ಬಹುಶಃ ಹಿಂದೆ ಯಾವುದೋ ಕ್ರೂರ ಹುಡುಗಿ ಅದನ್ನು ಹಿಂಸಿಸಿದ್ದಳೇನೋ, ಅಲ್ಯೋನ ಆ ಹುಡುಗಿಯಂತೆಯೇ ಕಾಣುತ್ತಿದ್ದಳೇನೋ – ಅಷ್ಟೇ ಎತ್ತರ ಅಂಥದೇ ಪೊದೆಗೂದಲು.

ಅಥವಾ ಅಲ್ಯೋನಳ ದೊಡ್ಡ ಧ್ವನಿ, ಥಟ್ಟನೆಯ ಎಳೆತ ನುಲಿತಗಳ ಚಲನೆ, ಅಲೀ ಸ್ಕಕ್ಕೆ ಇಷ್ಟವಾಗಿರಲಿಲ್ಲವೇ? ಯಾರಿಗೆ ಗೊತ್ತು?

ನಾನೇ ಈಚೀಚೆಗೆ ತುಂಬ ಜಾಗರೂಕತೆಯಿಂದ ಚಲಿಸುವುದನ್ನು ಮಾತನಾಡುವು ದನ್ನು ಕಲಿತು ಬಿಟ್ಟಿದ್ದೆ! ಅಲೀಸ್ಕ ನಮ್ಮ ಮನೆಯಲ್ಲಿ ವಾಸಮಾಡಲು ಬಂದ ಮೇಲೆ ನಾನು ಇನ್ನೆಷ್ಟು ಮಾತ್ರವೂ ನಡೆಯುತ್ತಿರಲಿಲ್ಲ ಆದರೆ ತೇಲಿಕೊಂಡು ಹೋಗುತ್ತಿದ್ದೆ, ಹಾವ ಭಾವ ಪ್ರದರ್ಶಿಸುತ್ತಿರಲಿಲ್ಲ ಆದರೆ ಕೇವಲ ಕೈಗಳನ್ನಷ್ಟೆ ಆಡಿಸುತ್ತಿದ್ದೆ, ಮಾತನಾಡುತ್ತಿ ರಲಿಲ್ಲ ಆದರೆ ಕೂಜಿತ ಧ್ವನಿ ಮಾಡುತ್ತಿದ್ದೆ, ಎಂದು ನನ್ನ ಮಿತ್ರರು ಹಾಸ್ಯ ಮಾಡುತ್ತಿ ದ್ದರು.

ನಾನು ಸಾಕು ಪ್ರಾಣಿಯನ್ನು ಬಿಟ್ಟು ಈ ಕಾಡು ಪ್ರಾಣಿಯನ್ನೇಕೆ ಮನೆಯಲ್ಲಿರಿಸಿ ಕೊಳ್ಳಲು ತಂದಿದ್ದೆ ಎಂದು ನನ್ನ ಮಿತ್ರರೆಲ್ಲ ನನ್ನನ್ನು ಕೇಳುವವರೇ! ಇಷ್ಟೊಂದೆಲ್ಲ ತೊಂದರೆ ಕೊಡುತ್ತಿರುವ ಇದನ್ನೇಕೆ ಆಯ್ಕೆ ಮಾಡಿಕೊಂಡಿದ್ದೆ?

ಇದಕ್ಕೆ ನಾನೇನು ಉತ್ತರ ಹೇಳಲಿ – ಸುಮ್ಮನೆ ಭುಜ ಎಗರಿಸಿದ್ದೆ. ಯಾಕೆ ತಂದಿದ್ದೆ? ಯಾಕೆಂದರೆ ಅದು ನನ್ನ ಬಾಳಿಗೆ ಆನಂದ ತಂದಿತ್ತು. ನನಗೂ ಅದಕ್ಕೂ ಮಧ್ಯೆ ತಿಳಿವಳಿ ಕೆಯ ಸೂತ್ರಗಳು ಹೆಚ್ಚು ಹೆಚ್ಚು ಹೆಣೆದುಕೊಳ್ಳುತ್ತಿದ್ದುದು, ಆ ಅವಿಧೇಯ ಅವಿಶ್ವಾಸ ಯುತ ಪ್ರಾಣಿಯ ಮೇಲೆ ನನ್ನ ಪ್ರೇಮ ವಿಜಯ ಸಾಧಿಸುತ್ತಿದ್ದುದು, ನನಗೆ ಅಪಾರ ಆನಂದ ತಂದಿದ್ದಿತು.

ನಾನು ಮನೆಗೆ ಬಂದಾಗ ಹೊರಗೆ ಲಿಫ್ಟ್‌ನ ಬಾಗಿಲು ತೆರೆದು ಹಾಕಿಕೊಂಡ ಶಬ್ದ

ಕೇಳಿದ ಕೂಡಲೇ ಅಲೀಸ್ಕ ಕಿವಿ ನಿಮಿರಿಸಿಕೊಂಡು ಚಿಮ್ಮಂಡೆಯಂತೆ ಕುಂಯಿಗುಟ್ಟುತ್ತ ಬಾಗಿಲಿಗೆ ನಾಯಿಮರಿಯಂತೆ ಧಾವಿಸಿ ಬರುವುದಿದ್ದಿತು ಎಂಬ ಭಾವನೆಯೇ ನನಗೆ ಅತೀವ ತೃಪ್ತಿ ಸಂತೋಷ ನೀಡುತ್ತಿದ್ದಿತು. ನಿಜ, ನಾನು ಮನೆಯ ಒಳ ಬರುತ್ತಲೇ ಅದು ತಾನು ಅಲ್ಲಿಗೆ ಬಂದುದು ನನ್ನ ಮೇಲೆ ತನ್ನ ಪ್ರೀತಿಯ ಮಳೆಗರೆಯಲೆಂದೇನೂ ಅಲ್ಲ, ಆದರೆ ಯಾಕೋ ಸುಮ್ಮನೆ ತನ್ನದೇ ಯಾವುದೋ ಕೆಲಸದ ನಿಮಿತ್ತ ಬಂದಿದ್ದಿತು, ಎನ್ನುವಂತೆ ಸೋಗು ಹಾಕುತ್ತಿದ್ದಿತು. ಅದು ನಿಜಕ್ಕೂ ಒಂದು ಆತ್ಮಾಭಿಮಾನದ ಪ್ರಾಣಿಯೇ ಆಗಿತ್ತು – ಆ ಪುಟ್ಟ ನರಿಮರಿ !

ನನಗೆ ಅದರಲ್ಲಿ ಇಷ್ಟವಾದದ್ದೂ ಅದರ ಈ ಆತ್ಮಾಭಿಮಾನದ, ಈ ಸಂಯಮದ, ಈ ಸ್ವತಂತ್ರತೆಯ ಗುಣವೇ ಎನ್ನಿ. ಈ ಗುಣ ನನ್ನ ಅದರ ಮಧ್ಯದ ಪ್ರತಿಯೊಂದು ಬಾಂಧವ್ಯದ ಎಳೆಯನ್ನೂ ಹೆಚ್ಚು ಪ್ರಶಸ್ತವನ್ನಾಗಿ ಮಾಡಿತ್ತು.

ದಿನವಿಡೀ ಕೆಲಸ ಮಾಡಿ ಬಳಲಿ ಬೇಸತ್ತು ನಾನು ಸಂಜೆ ಮನೆಗೆ ಹಿಂದಿರುಗುತ್ತಿದ್ದೆ. ಕೊನೆ ಇಲ್ಲದಂಥ ಬದುಕಿನ ತಾಪತ್ರಯಗಳಿಂದ ವ್ಯಗ್ರಗೊಂಡು ಸೋಫಾದ ಮೇಲೆ ಕುಸಿದು ಕುಳಿತುಕೊಳ್ಳುತ್ತಿದ್ದೆ. ಕೂಡಲೇ ಈ ಕಾಡು ಪ್ರಾಣಿ ಎಗರಿ ನನ್ನ ತೊಡೆಯ ಮೇಲೆ ಬಂದು ಕುಳಿತುಕೊಳ್ಳುತ್ತಿತ್ತು. ಆಗ ನನ್ನಲ್ಲಿ ಎಂಥ ಆನಂದ ಉಕ್ಕೇರುತ್ತಿತ್ತು !

ನಿಜ, ಅದು ತುಂಟತನವನ್ನೂ ಮಾಡುತ್ತಿತ್ತು. ಆದರೆ ಎಷ್ಟೇ ತುಂಟತನ ಮಾಡಲಿ, ಕೆಲವು ವೇಳೆ ಆ ತುಂಟತನ ಹುಚ್ಚು ಹಿಡಿಸುವಂತಿದ್ದರೂ ತಾಯಿಗೆ ಮಗುವಿನ ಮೇಲೆ ಪ್ರೀತಿ ಕಮ್ಮಿಯಾಗುತ್ತೆಯೇ ?

ಒಟ್ಟಿನಲ್ಲಿ ಹೇಳುವುದಾದರೆ, ಅಲೀಸ್ಕದ ಸ್ವಭಾವದಲ್ಲಿ ಕೋತಿಯ ಗುಣವೇ ಹೆಚ್ಚಿಗಿದ್ದಿತು. ಹಾಳು ಮಾಡುವ ಒತ್ತಾಸೆಯನ್ನು – ಹರಿಯುವ, ಮುರಿಯುವ, ಅಗಿದು ಹಾಕುವ ಒತ್ತಾಸೆಯನ್ನು – ಅದು ತನ್ನಲ್ಲಿ ಅದುಮಿ ಹಿಡಿಯದಾಗಿದ್ದಿತು. ಆದ್ದರಿಂದ ನಾವು ಮನೆಯಲ್ಲಿಲ್ಲದಿದ್ದಾಗ ಮತ್ತು ರಾತ್ರಿ ವೇಳೆಗಳಲ್ಲಿ ಅದನ್ನು ಅದರ "ಸ್ವಂತ ಮನೆಗೆ" – ಬಚ್ಚಲು ಮನೆ ಹಾಗೂ ಹಜಾರಗಳಿಗೆ – ಮಿತಿಗೊಳಿಸಿ ಇರಿಸಲಾಗುತ್ತಿತ್ತು. ಆದರೆ ಅದು ಈ ಏರ್ಪಾಟಿಗೆ ಎಂದೂ ಒಪ್ಪಿರಲಿಲ್ಲ. ಮತ್ತೆ ಮತ್ತೆ ಬಾಗಿಲು ಕೆರೆಯುತ್ತಿತ್ತು, ಕಡಿಯುತ್ತಿತ್ತು. ಒಂದು ದಿನವಂತೂ ಬೆಳಿಗ್ಗೆ ಎದ್ದು ನೋಡುತ್ತೇವೆ, ಹಜಾರದ ಹಲಗೆಯ ನೆಲಗಟ್ಟಿನ ಸುಮಾರು ಅರ್ಧಭಾಗವೇ ಕಿತ್ತು ಬಂದಿದೆ ! ನಾವು ದಿಗ್ಭ್ರಾಂತರಾದೆವು.

ನಾವು ಮನೆಯಲ್ಲೇ ಇದ್ದಾಗ ಅದನ್ನೂ ನಮ್ಮ ಕೋಣೆಗೆ ಬಿಡುತ್ತಿದ್ದೆವು ಅಥವಾ ಅದೇ ಬರುತ್ತಿದ್ದಿತು. ಆದರೆ ತೊಂದರೆ ಎಂದರೆ, ಅದು ಬಂದದ್ದೇ ಕೋಣೆಯ ಯಾವುದೋ ಕೈಗೆ ನಿಲುಕದ ಮೂಲೆಯಲ್ಲಿ ತನ್ನ "ಮನೆ" ಮಾಡಿಕೊಂಡು ಕೂರುತ್ತಿತ್ತು.

ಆಗೊಮ್ಮೆ ಈಗೊಮ್ಮೆ ಅಲೀಸ್ಕ ಹುಲುಸಾಗಿ ಬೆಳೆದಿದ್ದ ಬಾಲ ಹಿಡಿದು ಅಲಮಾರುವಿನ ಕೆಳಗಿನಿಂದ ಅದನ್ನು ಹೊರಗೆಳೆಯುವ ಕೀಳರಿಯದಂಥ ಸ್ವಾತಂತ್ರ್ಯವನ್ನೂ ನನಗೆ ನೀಡುತ್ತಿತ್ತು. ಅಂಥ ವೇಳೆಯಲ್ಲಿ ಅದು ಭೀತಿಕಾರಕವಾಗಿ ಕೆಮ್ಮುತ್ತಿತ್ತು, ಹಲ್ಲು ಬಿಡುತ್ತಿತ್ತು, ಆದರೆ ಎಂದೂ ಕಡಿಯುತ್ತಿರಲಿಲ್ಲ.

ಆದರೆ ಅದು ಸೋಫಾದ ಒಳಗೆ ತೂರಿಕೊಂಡು ಹೋಗಿ ಅಲ್ಲಿ ಸ್ಪ್ರಿಂಗುಗಳ ಮಧ್ಯೆ ಬಿಲ ಮಾಡಿಕೊಂಡು ಕೂತು ಬಿಟ್ಟರೆ ಏನು ಮಾಡುವುದು? ಆರಂಭದಲ್ಲಿ ನಾವು ನಮ್ಮ "ಮಾವಯ್ಯ ಧೂಳು ಚೋಷಕ"ದ – ಹಾಗೆಂದೇ ನಾವು ನಮ್ಮ ಈ ರಕ್ಷಕನನ್ನು ಗೌರವ ಪೂರ್ವಕವಾಗಿ ಕರೆಯುತ್ತಿದ್ದುದು – ಶರಣು ಹೋಗುತ್ತಿದ್ದೆವು. ಅದರ ಭೋರ್ಗರೆತದ ಮೊದಲ ಶಬ್ದ ಕೇಳಿದ ಕೂಡಲೇ ಅಲೀಸ್ಕ ಸೋಫಾದ ಒಳಗಿನಿಂದ ಹೊರಕ್ಕೆ ಹಾರಿ ಬರುತ್ತಿತ್ತು. ಅದರ ಕಣ್ಣುಗುಡ್ಡೆಗಳು ಹೊರಬರುವಂತಿರುತ್ತಿದ್ದವು. ಅದು ಬಚ್ಚಲುಮನೆಗೆ ಓಡಿ ಹೋಗಿ ತನ್ನ ಹಾಸಿಗೆಯ ಮೇಲೆ ಮಲಗುತ್ತಿತ್ತು. ಆದರೆ ಸ್ವಲ್ಪ ಕಾಲದನಂತರ ಅದು ಧೂಳು ಚೋಷಕದ ಶಬ್ದಕ್ಕೆ ಒಗ್ಗಿಕೊಂಡು ಬಿಟ್ಟಿತು. ಅದಕ್ಕೆ ಅದರ ಭಯ ಹೋಗಿ ಬಿಟ್ಟಿತು. ಅಷ್ಟೇ ಅಲ್ಲ ಧೂಳು ಚೋಷಕದ ಶಬ್ದ ಕೇಳಿಬಂದಾಗ ಅದು ಅದರತ್ತ ರೋಷದಿಂದ ಕೆಮ್ಮಲೂ ಪ್ರಾರಂಭಿಸಿತು. ಒಮ್ಮೆ ಅದನ್ನು ಕಚ್ಚಲೂ ಯತ್ನಿಸಿತು.

ಅದರ ಇನ್ನೊಂದು ಮೆಚ್ಚಿನ ಹವ್ಯಾಸವೆಂದರೆ ಟೆಲಿಫೋನ್ ತಂತಿಯನ್ನು ಅಗಿದು ಹಾಕುವುದು.

ಆದರೆ ನಮಗೆ ತುಂಬ ಸಹಿಸಲಾಗದಿದ್ದುದೆಂದರೆ – ನಮ್ಮ ಮನೆಯಲ್ಲೆಲ್ಲ, ಕೊನೆಗೆ ಹೊರಗೆ ಮಹಡಿಮೆಟ್ಟಿಲ ಬಳಿಯೂ, ಅಡರಿದ್ದ ಮೃಗಾಲಯದ ಗಬ್ಬುನಾತ.

ನಾನು ಬಸ್ ಹತ್ತಿದಾಗ ಅಥವಾ ಮೆಟ್ರೋ (ಭೂಗರ್ಭ) ರೈಲಿನ ಒಳ ಹೋದಾಗ ಜನ ತಕ್ಷಣವೇ ಮೂಸುತ್ತಿದ್ದುದು ನನ್ನ ಗಮನಕ್ಕೆ ಬರುತ್ತಿತ್ತು. ನಮ್ಮ ಬಟ್ಟೆಗಳೆಲ್ಲ ಅಲೀಸ್ಕದ ವಾಸನೆಯನ್ನೇ ಹೊರ ಹೊಮ್ಮಿಸುತ್ತಿದ್ದವು. ಒಮ್ಮೆ ಮೆಟ್ರೋದಲ್ಲಿ ಯಾರೋ ಒಬ್ಬ ವಿಷಪೂರಿತ ಮುದುಕಿ "ಅಬ್ಬಾ! ಕಣ್ಣಿಗೆಲ್ಲ ಬಣ್ಣ ಹಚ್ಚಿ

ಕೊಂಡು ಎಂಥ ಅಲಂಕಾರ ಮಾಡಿಕೊಂಡಿದ್ದಾಳೆ, ಆದರೆ ಮೇಕೆಯಂಥ ಗಬ್ಬುನಾತ !" ಎಂದು ಗೊಣಗಿದುದೂ ನನಗೆ ಕೇಳಿಬಂದಿತು.

ಆ ವಾಸನೆಯನ್ನು ಹೋಗಲಾಡಿಸುವುದಂತೂ ಸಾಧ್ಯವಿರಲಿಲ್ಲ. ಅದು ಯಾವುವೇ ನಿರ್ಗಂಧಕಾರಕಗಳಿಗೂ ಬಗ್ಗುತ್ತಿರಲಿಲ್ಲ.

ಆ ದಿನಗಳಲ್ಲಿ ನಾನು ಮನೆಯಲ್ಲಿದ್ದಾಗ ಹೆಚ್ಚಿನ ವೇಳೆಯನ್ನೆಲ್ಲ ಕೈಯಲ್ಲಿ ತುಂಡು ಬಟ್ಟೆ ಹಿಡಿದು ನೆಲದ ಮೇಲೆ ಸರಿದಾಡುತ್ತಲೇ ಕಳೆಯುತ್ತಿದ್ದೆ – ಅಲೀಸ್ಕ ಮಾಡಿದ್ದ ಕೊಳೆ ಕರೆಗಳನ್ನೆಲ್ಲ ಉಜ್ಜಿ ಒರಸಿ ಬಾಯಿ ದುರ್ಗಂಧ ಹೋಗಿಸುವ ದ್ರವ್ಯ ಸಿಂಪಡಿಸುತ್ತಿದ್ದೆ. ಅದನ್ನು ನಾನು ಅಷ್ಟೊಂದು ಭಾರಿ ಪ್ರಮಾಣದಲ್ಲಿ ಕೊಂಡಾಗ ಗ್ರಂದಿಗೆ ಅಂಗಡಿಯಲ್ಲಿ ಆಶ್ಚರ್ಯಪಟ್ಟಿದ್ದರು.

ನನ್ನ ಮಿತ್ರನೊಬ್ಬ ನನಗೆ ಭಾರತದಿಂದ ಒಂದು ಅಮೂಲ್ಯ ಬಳುವಳಿ ತಂದು ಕೊಟ್ಟ – ಸುಗಂಧದ ಊದುಬತ್ತಿಗಳು. ನಾವದನ್ನು "ನರಿ ನಾತ ನಾಶಕ" ಎಂದೇ ಕರೆಯು ತ್ತಿದ್ದೆವು. ನಮ್ಮ ಮನೆಗೆ ಅತಿಥಿಗಳು ಬರುವರೆಂದಾಗಲೆಲ್ಲ ನಾನು ಈ ಒಂದೆರಡು ಊದು ಬತ್ತಿಗಳನ್ನು ಹತ್ತಿಸಿ ಇರಿಸುತ್ತಿದ್ದೆ. ಅವು ಹೊಗೆ ಹೊಮ್ಮಿಸುತ್ತಿದ್ದಂತೆ ಕೋಣೆಗಳ ಮೂಲಕ ಮಧುರವಾದ ಸುವಾಸನೆ – ದೂರದ ಅದ್ಭುತದ ಭಾರತದ, ನಿಗೂಢ ದೇವಾಲಯಗಳ ಆ ಕೆಂಪು – ತೇಲಿ ಬರುತ್ತಿತ್ತು. ಮತ್ತು... ಅಲೀಸ್ಕದ ವಾಸನೆ... ಇದನ್ನು ಯಾವ "ನರಿ ನಾತ ನಾಶಕ"ವೂ ಹೋಗಿಸದಾಗಿದ್ದಿತು.

ನಮ್ಮ ಅದೃಷ್ಟಕ್ಕೆ ಬೇಸಿಗೆಕಾಲ ಬಂದು ಸಮಸ್ಯೆಯನ್ನು ಮುಂದೆ ಹಾಕಿತು. ನಾವು ಮಾಸ್ಕೋದ ಹೊರ ವಲಯದಲ್ಲಿ ಒಂದು ಸಣ್ಣ ಮನೆಯನ್ನು ಯಾವುದೋ ಅಜ್ಜಿ ಮಾಷಳಿಂದ ಬಾಡಿಗೆಗೆ ತೆಗೆದುಕೊಂಡು ಎಲ್ಲರೂ – ಅಲೀಸ್ಕ, ನಾಯಿ ಸೋಮಿ, ಬೆಕ್ಕು, ಮತ್ತೆಲ್ಲರೂ – ಅಲ್ಲಿಗೆ ಸ್ಥಳಾಂತರಿಸಿದೆವು. ಅಲ್ಲಿ ಅಲೀಸ್ಕವನ್ನು ಒಂದು ನಾಯಿಮನೆ ಯಲ್ಲಿ ಇರಿಸಲಾಯಿತು. ಅದು ಅದಕ್ಕೆ ಒಂದು ಭವ್ಯ ವಾಸಸ್ಥಳವೇ ಆಗಿದ್ದಿತು. ಆಡಲು ಸುತ್ತ ಬೇಲಿ ಹಾಕಿದ ಒಂದು ದೊಡ್ಡ ಮೈದಾನವೂ ಇದ್ದಿತು.

ಅಲ್ಲಿಗೆ ಸ್ಥಳಾಂತರಿಸಿದ ಮಾರನೆಯ ದಿನ ನಾನು ಅಲೀಸ್ಕ ತನ್ನ ಆವರಣದಲ್ಲಿ ಸೋಮಿ ನಾಯಿಯೊಂದಿಗೆ ಆಟವಾಡುತ್ತಿದ್ದುದನ್ನು ಕಂಡು ವಿಸ್ಮಿತಳಾದೆ. ಅವು ಒಂದು ಜೊತೆ ಮುದ್ದಿನ ನಾಯಿಮರಿಗಳಂತೆ ಒಂದರ ಮೇಲೊಂದು ಬೀಳುತ್ತ ಚಿನ್ನಾಟವಾಡು

ತ್ತಿದ್ದವು. ಅಂದ ಮೇಲೆ, ನಾಯಿಗಳಲ್ಲಿ ನರಿಗಳ ಬಗೆಗೆ "ಹುಟ್ಟು ದ್ವೇಷ"ವಿರುತ್ತದೆ ಅನ್ನುವ ಮಾತಿಗೆ ಏನು ಹೇಳೋಣ !

ನಮ್ಮ ಸೋಮಿ ತುಂಬ ಒಳ್ಳೆಯ ಸ್ವಭಾವದ್ದು ನಿಜ. ಯಾವ ತೊಂದರೆಯನ್ನೂ ಕೊಡುತ್ತಿರಲಿಲ್ಲ. ಅಂಥದನ್ನು ನಾನೆಂದೂ ಕಂಡಿರಲಿಲ್ಲವೆಂದೇ ಹೇಳಬೇಕು. ಅದು ನಮ್ಮ ಆ ಹಳ್ಳಿಯ ಮನೆಯ ಎಲ್ಲರೊಂದಿಗೂ, ರಾತ್ರಿ ವೇಳೆಗಳಲ್ಲಿ ಕಾಡಿನಿಂದ ನಮ್ಮಲ್ಲಿಗೆ ಭೇಟಿ ಕೊಡುತ್ತಿದ್ದ ಮುಳ್ಳುಹಂದಿಗಳೊಂದಿಗೂ, ಸ್ನೇಹ ಬೆಳೆಸಲು ಯತ್ನಿಸುತ್ತಿದ್ದಿತು. ಆದರೆ ಅದರ ಈ ಎಲ್ಲ ಪ್ರಯತ್ನಗಳೂ ಅದರ ಮೂತಿ ರಕ್ತಮಯವಾಗುವುದರಲ್ಲೂ ಅದರ ಆಸೆಗಳೆಲ್ಲ ಮಣ್ಣುಗೂಡುವುದರಲ್ಲೂ ಕೊನೆಗಾಣುತ್ತಿದ್ದವೆಂಬುದು ನಿಜ. ಆದರೂ ಅನಂತರ ಬರುವ ಮುಳ್ಳುಹಂದಿಯಾದರೂ ತನ್ನ ನಿಷ್ಕಲ್ಮಷ ಆತ್ಮದ ದರ್ಶನ ಪಡೆ ಯಲಿದ್ದಿತೆಂಬ ತನ್ನ ವಿಶ್ವಾಸವನ್ನು ಅದು ಎಂದೂ ಕಳೆದುಕೊಳ್ಳುತ್ತಿರಲಿಲ್ಲ.

ಆದರೆ ಸೋಮಿ ಈ ನರಿಯ ನಿವಾಸಕ್ಕೆ ಹೇಗಾದರೂ ಬಂದಿತು ? ಎರಡು ಮೀಟರ್ ಎತ್ತರದ ತಂತಿಬಲೆಯ ಬೇಲಿ ಹಾರಿಕೊಂಡು ಬಂದಿದ್ದಿತೆ ?

ಸರಿ, ಇಲ್ಲಿಂದ ಹೇಗೆ ಹೊರ ಹೋಗುತ್ತದೋ ಕಾದು ನೋಡುತ್ತೇನೆ.

ಅದು ಈ ಕಾರ್ಯವನ್ನು ಬಹಳ ಸರಳವಾಗಿ ಮಾಡಿತು. ಬೇಲಿಯ ತಂತಿಗಳನ್ನು ತನ್ನ ಉಗುರುಗಳಿಂದ ಹಿಡಿದುಕೊಂಡು ಅದು ಬೆಕ್ಕಿನಂತೆ ಬೇಲಿ ಮೇಲೇರಿತು. ಅದು ಅಂಥ ಸೊಗಸಾದ ದೃಶ್ಯವೇನಾಗಿರಲಿಲ್ಲವೆನ್ನಿ. ಆದರೂ ನಾನು "ಬೇಲಿ ಮೇಲಿನ ನಾಯಿ" ಎಂಬ ಗಾದೆ ಮಾತಿನ ದೃಶ್ಯವನ್ನು ಕಣ್ಣಾರೆ ಕಂಡೆ.

ಈಗ ಸೋಮಿ ತನ್ನ ಗೆಳತಿಯ ಮನೆಗೆ ಹಗಲೋ ರಾತ್ರಿಯೋ ಯಾವಾಗ ಅಂದರೆ ಆವಾಗ ಭೇಟಿಕೊಡಬಲ್ಲುದಿದ್ದಿತು. ಅವು ಸಂಧಿಸುತ್ತಿದ್ದ ಪರಿ ಸಾಮಾನ್ಯವಾಗಿ ಒಂದೇ ರೀತಿಯದಾಗಿರುತ್ತಿದ್ದಿತು. ಸೋಮಿಯನ್ನು ಕಂಡ ಕೂಡಲೇ ಅಲೀಸ್ಕ ತನ್ನಲ್ಲಿ ಉಕ್ಕೇ ರಿದ ಭಾವನೆಗಳನ್ನು ಹತ್ತಿಕ್ಕಲಾಗದೆ ಅಂಗಳದಲ್ಲೆಲ್ಲ ಕುಣಿದು ಕುಪ್ಪಳಿಸುತ್ತ ಓಡಾಡ ತೊಡಗುತ್ತಿತ್ತು. ಸೋಮಿ ಬೇಲಿ ಇಳಿದು ಬರುವವರೆಗೂ ಇದು ಜರುಗುತ್ತಿತ್ತು. ಬೇಲಿ ಇಳಿದು ಅಲೀಸ್ಕದ ರಾಜ್ಯದಲ್ಲಿ ಪದಾರ್ಪಣ ಮಾಡಿದ ಕೂಡಲೇ ಸೋಮಿ ನರಿ ಯನ್ನು ಅಟ್ಟಿಸಿಕೊಂಡು ಹೋಗುತ್ತಿತ್ತು – ಅದರ ಬಾಲವನ್ನು ಕಚ್ಚಿ ಹಿಡಿದೆಳೆಯುವ ಹೆಬ್ಬಯಕೆಯಿಂದ ಪ್ರೇರಿತವಾಗಿ. ಹೀಗೆ ಎರಡೂ ಒಂದರ ಹಿಂದೊಂದು ಭಾರಿ ಭಾವಾ

ವೇಶಕ್ಕೊಳಗಾಗಿ ಓಡುತ್ತಿದ್ದವು. ಕೆಲವೊಮ್ಮೆ ಅಲೀಸ್ಕ ತನ್ನ ಓಟದ ದಿಕ್ಕನ್ನು ಎಷ್ಟು ಫಕ್ಕನೆ ತಿರುಗಿಸುತ್ತಿದ್ದಿತೆಂದರೆ ನಾಯಿ ತನ್ನ ಓಟದ ವೇಗವನ್ನು ತಡೆ ಹಿಡಿಯಲಾಗದೆ ಜೋರಾಗಿ ಹೋಗಿ ಬೇಲಿಗೆ ಡಿಕ್ಕಿ ಹೊಡೆಯುತ್ತಿತ್ತು.

ಇವುಗಳ ಈ ಆಟದ ಗದ್ದಲದಿಂದ ಆಕರ್ಷಿತವಾಗಿ ಕೆಲವು ವೇಳೆ ಬೆಕ್ಕಿನಮರಿಯೂ ಅಲ್ಲಿಗೆ ಬರುತ್ತಿತ್ತು. ಅದು ಬೇಲಿಯ ನಾಲ್ಕು ಮೂಲೆಗಂಬಗಳಲ್ಲೊಂದರ ಮೇಲೆ, ಕಾವಲು ಗೋಪುರದ ಮೇಲಿನ ಪಹರೆಗಾರನಂತೆ, ಕುಳಿತು ತನ್ನ ಅಗಲವಾದ ಹಳದಿ ಕಣ್ಣುಗಳನ್ನು ಆ "ಹೋರಾಟಗಾರರ" ಮೇಲೇ ನೆಟ್ಟು ನೋಡುತ್ತಿರುತ್ತಿತ್ತು. ಅದು ಸ್ಪಷ್ಟವಾಗಿಯೇ ಅಲೀಸ್ಕದ ಪರವಾಗಿತ್ತು. ನರಿ ಆ ರಕ್ತಪಿಪಾಸು ನಾಯಿಯ ದವಡೆಗೆ ಸಿಕ್ಕಿ ಬೀಳುವುದೆಂದು ಅನ್ನಿಸಿದಾಗಲೆಲ್ಲ ಬೆಕ್ಕಿನಮರಿ ತುಂಬ ಕ್ಷೋಭೆಗೊಳ್ಳುತ್ತಿತ್ತು. ಅಂಥ ಘಳಿಗೆಗಳಲ್ಲಿ ಅದು ತನ್ನ ಬೆನ್ನನ್ನು ಬಿಲ್ಲಿನಂತೆ ಸಾಧ್ಯವಾದಷ್ಟೂ ಹೆಚ್ಚು ಬಾಗಿಸುತ್ತಿತ್ತು, ಅದರ ಮೈಗೂದಲು ನಿಮಿರಿ ನಿಲ್ಲುತ್ತಿತ್ತು. ಅದು ಉದ್ರಿಕ್ತವಾಗಿ ಉತ್ಕಂಠಿತ ಧ್ವನಿಯಲ್ಲಿ ಅರಚುತ್ತಿತ್ತು, ನಾಯಿಯ ಮೇಲೆ ಹೋಗಿ ಬೀಳಲು ಸಿದ್ಧವಾಗುತ್ತಿದೆಯೋ ಅನ್ನುವಂತೆ. ಅಂಥ ಅನೇಕ ಸಂದರ್ಭಗಳಲ್ಲಿ ನಾನು ಕಷ್ಟದಿಂದ ಸಕಾಲದಲ್ಲೇ ಅದನ್ನು ಬೇಲಿಯ ಮೇಲಿನಿಂದ ಹಿಡಿದೊಯ್ಯಲು ಯಶಸ್ವಿಯಾಗಿದ್ದೆ.

ಅಲೀಸ್ಕ ಮತ್ತು ಸೋಮಿ ಒಂದೇ ಬೋಗುಣಿಯಿಂದ ತಮ್ಮ ಆಹಾರ ಉಣ್ಣುತ್ತಿದ್ದವು. ಅಲೀಸ್ಕ ಮನೆಯೊಡತಿಯಾಗಿದ್ದಿತಷ್ಟೆ. ಆದ್ದರಿಂದ ಅದಕ್ಕೇ ಯಾವತ್ತೂ ಮೊದಲ ತುತ್ತು. ಸೋಮಿ ಪಕ್ಕದಲ್ಲಿ ವಿನೀತವಾಗಿ ಕಾಯುತ್ತ ನಿಂತಿರುತ್ತಿತ್ತು. ತನ್ನ ಗೆಳತಿ ಹೊಟ್ಟೆ ತುಂಬ ಉಣ್ಣುವವರೆಗೂ ಅದು ತಾಳ್ಮೆಯಿಂದ ಕಾಯುತ್ತ ನಾಲಿಗೆಯಿಂದ ತುಟಿ ಸವರಿಕೊಳ್ಳುತ್ತ ನಿಂತಿರುತ್ತಿದ್ದಿತು. ಆದರೆ ಅದರ ಗೆಳತಿ ತುಂಬ ದುರಾಸೆಯದಾಗಿತ್ತು. ತಾನು ಎಲ್ಲವನ್ನೂ ತಿಂದು ಮುಗಿಸಲಾಗುವುದಿಲ್ಲ ಎಂಬ ಯೋಚನೆಯೇ ಅದನ್ನು ಕೆರಳಿಸುತ್ತಿತ್ತು. ಅದು ಅವಸರವಸರವಾಗಿ ತುರುಕಿಕೊಳ್ಳುತ್ತಿತ್ತು, ಗಂಟಲಲ್ಲಿ ಸಿಕ್ಕಿ ಹಾಕಿಕೊಳ್ಳುವಂತೆ ಮಾಡಿಕೊಳ್ಳುತ್ತಿತ್ತು. ಕೆಲವೊಮ್ಮೆ ಜಗಿಯದೆಯೇ ದೊಡ್ಡ ದೊಡ್ಡ ಮಾಂಸದ ತುಂಡುಗಳನ್ನೂ ಹಾಗೆಯೇ ನುಂಗಿ ಬಿಡುತ್ತಿತ್ತು. ಕೊನೆಗೆ ತನ್ನ ಹೊಟ್ಟೆಯಲ್ಲಿ ಇನ್ನೆಷ್ಟು ಮಾತ್ರವೂ ಆಹಾರಕ್ಕೆ ಸ್ಥಳವಿಲ್ಲ ಎಂಬ ಭಾವನೆ ಬಂದ ಮೇಲೆ ಅದು ಒಂದು ದೊಡ್ಡ ಮಾಂಸದ ತುಂಡನ್ನು ತನ್ನ ಹಲ್ಲುಗಳಲ್ಲಿ ಕಚ್ಚಿ ಹಿಡಿದು ಓಡಿ ಹೋಗುತ್ತಿತ್ತು – ಸ್ನೇಹ,

ಗೆಳೆತನ ಎಲ್ಲ ಸರಿಯೇ, ಆದರೆ ಹೊಟ್ಟೆಯ ಪ್ರಶ್ನೆ ಮೊದಲಷ್ಟೆ ಎಂದು ಹೇಳುತ್ತಿದೆಯೋ ಅನ್ನುವಂತೆ.

ಹೀಗೆ ಕಚ್ಚಿಕೊಂಡಿದ್ದ ತನ್ನ ನಿಧಿಯನ್ನು ಅದು ಕೊನೆಗೆ ಎಲ್ಲೋ ಹೂಳುತ್ತಿತ್ತು. ಆದರೆ ಗಾಬರಿಗೊಂಡು ಅದನ್ನು ಅಗೆದು ತೆಗೆದು ಹಲ್ಲಿನಲ್ಲಿ ಕಚ್ಚಿ ಹಿಡಿದು ಮತ್ತೆ ಓಡಾಡ ತೊಡಗುತ್ತಿತ್ತು.

ಸೋಮಿ ಅಲೀಸ್ಕದ ವಿಚಿತ್ರ ವರ್ತನೆಗಳನ್ನು ವಿಚಲಗೊಳ್ಳದೆ ನೋಡುತ್ತಲಿದ್ದು, ಅನಂತರ ಅಷ್ಟೇ ಶಾಂತ ರೀತಿಯಲ್ಲಿ ಹೋಗಿ ಅಲೀಸ್ಕ ಹೂತಿಟ್ಟಿದ್ದ ಮಾಂಸದ ತುಂಡುಗಳ ದಾಸ್ತಾನನ್ನು ಅಗೆದು ತೆಗೆದು ತಿನ್ನುತ್ತಿತ್ತು.

ನರಿಯೂ ನಾಯಿಯೂ ಸದಾ ಒಟ್ಟಿಗೆ ಅಗಲದಂತಿರುತ್ತಿದ್ದವು. ಅಲೀಸ್ಕಕ್ಕೆ ಅಂಥ ನಿಷ್ಠಾವಂತ ಮಿತ್ರ ದೊರಕಿದುದು ನಮಗೆ ಸಂತೋಷವೇ ಆಯಿತು. ಆದರೆ ಒಮ್ಮೆ ನನಗೆ ಪುಟ್ಟ ನಾಯಿಮರಿಯೊಂದರ ಗೋಳು ಕರೆಯಂಥ ಕೀಚಲು ಧ್ವನಿ ಕೇಳಿಬಂದಿತು. ಯಾರದು ಈ ಗೋಳು ಕರೆ?

ಹೋಗಿ ನೋಡಿದಾಗ ನನಗೆ ಅಲೀಸ್ಕ ಕಂಡುಬಂದಿತು. ಆಟ ತುತ್ತ ತುದಿ ತಲುಪಿದ್ದಾಗ ನಾಯಿ ಅಲೀಸ್ಕವನ್ನು ಬಿಟ್ಟು ಹೊರಟು ಹೋಗಿದ್ದಿತು. ತನ್ನನ್ನು ಅಗಲಿ ಹೋಗಿದ್ದ ಜೊತೆಗಾರನನ್ನು ಹಿಂಬಾಲಿಸಿ ಹೋಗಲು ಬಯಸಿ ಅಲೀಸ್ಕ ಬೇಲಿ ಹತ್ತಲು ಯತ್ನಿಸು ತ್ತಿದ್ದಿತು. ಆದರೆ ಜಾರಿ ಬೀಳುತ್ತಿತ್ತು. ಮತ್ತೆ ಹತ್ತಲು ಯತ್ನಿಸುತ್ತಿತ್ತು, ಮತ್ತೆ ಜಾರಿ ಬೀಳುತ್ತಿತ್ತು...

ಅನಂತರದ ದಿನಗಳಲ್ಲಿ ನಾನು ಹೆಚ್ಚು ಆಗಾಗ್ಗೆ ಈ ಕೀಚಲು ಧ್ವನಿ ಕೇಳ ತೊಡಗಿದೆ. ಅಲೀಸ್ಕದ ಮನೆಯ ಸುತ್ತಲಿನ ಬೇಲಿಯನ್ನು ಹತ್ತುವುದನ್ನು ಕಲಿತನಂತರ ಸೋಮಿ ತನ್ನ ಹೊಸದಾಗಿ ಗಳಿಸಿಕೊಂಡಿದ್ದ ಕೌಶಲವನ್ನು ಈಗ ನಮ್ಮ ತೋಟದ ಬೇಲಿ ಹತ್ತಿ ಹೊರ ಹೋಗಲು ಬಳಸುತ್ತಿದ್ದಿತು – ಬೀದಿಯಲ್ಲಿ ಅಷ್ಟೊಂದು ಹೆಣ್ಣು ನಾಯಿಗಳೂ ಅವು ಗಳ ಹಿಂದೆ ಅವುಗಳ ಅನುರಾಗಿಗಳೂ ಅಲೆದಾಡುತ್ತಿದ್ದಾಗ ನಮ್ಮ ಮನೆಯ ಈ ನಾಯಿ ಯೊಂದನ್ನೇ ಮನೆಯಲ್ಲೇ ಇರುವಂತೆ ತಡೆ ಹಿಡಿಯುವುದು ಅಸಾಧ್ಯವಾಗಿದ್ದಿತು. ಬಹು ಆಗಾಗ್ಗೆ ಈ ನಾಯಿಗಳ ಮಧ್ಯೆ ಹೋರಾಟ ಪ್ರಾರಂಭವಾದಾಗ ಅವುಗಳ ಬಗುಳುಗಳ ಕಿವುಡಾಗಿಸುವಂಥ ಭೋರ್ಗರೆತ ಕೇಳಿಬರುತ್ತಿತ್ತು.

ಕೆಲವು ವೇಳೆ ನಮ್ಮ ಸೋಮಿ ಒಟ್ಟಿಗೇ ಮೂರು-ನಾಲ್ಕು ದಿನ ಮನೆಯಿಂದ ಹೊರಗೇ ಇದ್ದು ಬಿಡುತ್ತಿದ್ದಿತು. ಆಮೇಲೆ ಮನೆಗೆ ತುಂಬ ಬಳಲಿ ದುರವಸ್ಥೆಯ ಸ್ಥಿತಿಯಲ್ಲಿ ಹಿಂದಿರುಗುತ್ತಿತ್ತು. ಅದರ ಮೈ ತುಂಬ ಗೀಚು ಗಾಯಗಳಾಗಿರುತ್ತಿದ್ದವು.

ಮನೆಗೆ ಹಿಂದಿರುಗಿದಾಗ ಸೋಮಿ ಹೊರ ಬೇಲಿಯಿಂದ ತನ್ನ ಗೂಡಿನವರೆಗೂ ತೆವಳಿಕೊಂಡೇ ಹೋಗುತ್ತಿತ್ತು. ಆಮೇಲೆ ಹಲವಾರು ದಿನ ತನ್ನ ದೇಹಕ್ಕೂ ಮನಸ್ಸಿಗೂ ಆಗಿದ್ದ ಗಾಯಗಳನ್ನು ನೆಕ್ಕಿ ಗುಣಪಡಿಸಿಕೊಳ್ಳುತ್ತ ಮನೆಯಲ್ಲೇ ಉಳಿದಿರುತ್ತಿದ್ದಿತು. ಸ್ವಲ್ಪ ಗುಣವಾದ ಕೂಡಲೇ ಮತ್ತೆ ಹೊರ ಹೊರಡುತ್ತಿದ್ದಿತು.

ಸಂಗಾತಿಯ ಸ್ನೇಹದಿಂದ ವಂಚಿತವಾದ ಅಲೀಸ್ಕ ಉತ್ಸಾಹಹೀನವಾಗಿ ಮಂಕು ಕವಿದಂತೆ ಕಾಣ ತೊಡಗಿತು. ಅದು ಇನ್ನೆಷ್ಟು ಮಾತ್ರವೂ ಹಿಂದಿದ್ದಂತೆ ಚೈತನ್ಯದ ಬುಗ್ಗೆಯಾಗಿರಲಿಲ್ಲ.

ಆಗ ಒಂದು ದಿನ ತನ್ನ ಎಂದಿನ ಅಲೆದಾಟಗಳನ್ನು ಮುಗಿಸಿಕೊಂಡು ಹಿಂದಿರುಗಿದ ಸೋಮಿ ಅಲೀಸ್ಕದ ಆವರಣದಲ್ಲಿ ಕಾಣಿಸಿಕೊಂಡಿತು. ಅದನ್ನು ಕಂಡ ಕೂಡಲೇ ಅಲೀಸ್ಕ ಆನಂದದಿಂದ ಕುಣಿದು ಕುಪ್ಪಳಿಸುವುದೆಂದು ನಾವು ನಿರೀಕ್ಷಿಸಿದ್ದೆವು. ಆದರೆ ಅಲೀಸ್ಕ ನಾಯಿಯ ಬಗೆಗೆ ಸಂಪೂರ್ಣ ನಿರ್ಲಕ್ಷ್ಯ ತೋರಿತು. ಹಿಂದಿನಂತೆ ಜೂಟಾಟವಾಡಲು ನಾಯಿ ನಡೆಸಿದ ಯತ್ನಗಳೆಲ್ಲ ವಿಫಲವಾದವು. ಅಲೀಸ್ಕ ನಾಯಿಯತ್ತ ಉದಾಸೀನದಿಂದ ದುರುಗುಟ್ಟಿಕೊಂಡು ನೋಡಿತು, ಅಗಲವಾಗಿ ಬಾಯಿ ತೆರೆದು ಆಕಳಿಸಿತು, ಹಿಂದಿರುಗಿ ತನ್ನ ಗೂಡಿನೊಳಕ್ಕೆ ನಿಧಾನ ಗತಿಯಲ್ಲಿ ನಡೆದು ಹೋಯಿತು.

ಮುಂಜಾನೆ. ನಾನು ಆಹಾರ ತುಂಬಿದ ಬೋಗುಣಿಯನ್ನು ಅಲೀಸ್ಕದ ಮುಂದೆ ತಂದಿರಿಸುತ್ತೇನೆ.

ನನ್ನನ್ನು ದೂರದಿಂದ ಕಂಡ ಕೂಡಲೇ ಅಲೀಸ್ಕ ತನ್ನ ಆವರಣದಲ್ಲಿ ಹಿಂದಕ್ಕೂ ಮುಂದಕ್ಕೂ ಅಡ್ಡಾಡುತ್ತೆ. ಅದಕ್ಕೆ ಹಸಿವಾಗಿದೆ. ಬೆಳಗಿನ ಉಪಾಹಾರ ತಿನ್ನಲು ಅದು ಕಾತುರವಾಗಿದೆ. ನಾನು ಆವರಣದ ಒಳ ಹೊಕ್ಕಾಗ ಅದು ಚಿನ್ನಾಟವಾಡುವ ನಾಯಿಮರಿಯಂತೆ ನನ್ನ ಸುತ್ತಮುತ್ತ ಕುಣಿದಾಡುತ್ತೆ, ಉಪಾಹಾರವನ್ನು ಬೇಗ ಕೊಡುವಂತೆ, ತಾಳ್ಮೆಗೆಟ್ಟಂತೆ, ನನ್ನ ಉಡುಪಿನ ಅಂಚುಗಳನ್ನು ಹಿಡಿದೆಳೆಯುತ್ತೆ.

ಅದಕ್ಕೆ ಉಪಾಹಾರ ನೀಡಿದನಂತರ ನಾನು ಅದರ ಆವರಣವನ್ನು ಸ್ವಚ್ಛಗೊಳಿಸ

ತೊಡಗುತ್ತೇನೆ. ಅಲೀಸ್ಕ ನನ್ನ ಕೆಲಸಕ್ಕೆ ಅಡ್ಡಿ ಬರಲು ತನ್ನೆಲ್ಲ ಯತ್ನ ಮಾಡುತ್ತೆ – ಕುಂಟೆ ಯನ್ನು ಕಚ್ಚ ಹೋಗುತ್ತೆ, ನನ್ನ ಪಾದಗಳ ಮೇಲೆ ಜಿಗಿದು ಬೀಳುತ್ತೆ, ಇಲಿಗಳನ್ನು ಹಿಡಿ ಯುವಾಗ ಸಾಮಾನ್ಯವಾಗಿ ನರಿಗಳು ಮಾಡುವಂತೆ.

ಹವಾಗುಣ ಚೆನ್ನಾಗಿದ್ದಾಗ ನಾನು ಅಲೀಸ್ಕದ ಆವರಣದಲ್ಲೇ ಬಂದು ಕುಳಿತು ಕೆಲಸ ಮಾಡುವುದನ್ನು ಹೆಚ್ಚು ಇಷ್ಟಪಡುತ್ತಿದ್ದೆ. ಅದಕ್ಕಾಗಿ ಒಂದು ಹಗುರವಾದ ಮಡಚುವ ಮೇಜನ್ನೂ ಅಂಥದೇ ಒಂದು ಕುರ್ಚಿಯನ್ನೂ ತಂದಿರಿಸಿಕೊಳ್ಳುತ್ತಿದ್ದೆ. ಇವುಗಳ ಕಾಲುಗಳ ಮೇಲೆ ಅಲೀಸ್ಕದ ಹಲ್ಲಿನ ಗುರುತುಗಳಿದ್ದವು.

ನನಗೆ ದೊರೆತ ಪ್ರತಿ ಗಂಟೆಯನ್ನೂ ಪ್ರತಿ ನಿಮಿಷವನ್ನೂ ಅಲೀಸ್ಕದೊಂದಿಗೆ ನನ್ನ ಸಂಪರ್ಕವನ್ನು ಬೆಳೆಸಿಕೊಳ್ಳುವಂತೆ ಮತ್ತು ಅದಕ್ಕೆ ಹೆಚ್ಚು ಸನಿಹವಾಗುವಂತೆ ಬಳಸಲು ನಾನು ಕಾತುರಳಾಗಿದ್ದೆ.

ಆ ಆವರಣದಲ್ಲಿ ಕುಳಿತು ಕೆಲಸ ಮಾಡುವುದು ನನಗೆ ಬಹಳ ಇಷ್ಟವಾಗಿತ್ತು. ವಿಚಿತ್ರವೆನ್ನುವಂತೆ, ಅದರ ತಂತಿಬಲೆ ಬೇಲಿ ನನ್ನನ್ನು ದೈನಂದಿನ ಕ್ಷೋಭೆ ಚಿಂತೆ ಗಳಿಂದ ರಕ್ಷಿಸುತ್ತಿದ್ದಂತೆ ನನಗೆ ಭಾಸವಾಗುತ್ತಿತ್ತು.

ಆದರೆ ತನ್ನ ಕಡೆಗೆ ಗಮನ ನೀಡಬೇಕೆಂಬುದು ನರಿಯ ಅಪೇಕ್ಷೆ. ಅದು ಮೇಜಿನ ಕಾಲುಗಳನ್ನು ಹೆಚ್ಚು ಉಗ್ರವಾಗಿ ಕಡಿಯ ತೊಡಗುತ್ತೆ, ನನ್ನ ಕಾಲುಗಳನ್ನೂ ಕೆರೆಯುತ್ತೆ. ಆದರೆ ಇದು ಎಷ್ಟು ಮಾತ್ರವೂ ನನ್ನ ಕೆಲಸಕ್ಕೆ ಅಡ್ಡಿ ಬರುತ್ತಿಲ್ಲ. ನಾನು ಅನ್ಯಮನಸ್ಕ ಳಾಗಿಯೇ ಅದರೊಂದಿಗೆ ಆಡುತ್ತೇನೆ. ಕೆಲಸದ ಮೇಲೆ ನನ್ನ ಗಮನ ಕೇಂದ್ರೀಕೃತ ವಾಗಿಯೇ ಇದೆ. ಇಡೀ ಕಾಲ ನನಗೆ ಏನೋ ಒಂದು ರೀತಿಯ ಸಂತೋಷ – ಈ ಜಗತ್ತಿನಲ್ಲಿ ಒಂದು ಪ್ರಾಣಿ ಇದೆ, ಅದನ್ನು ಎಲ್ಲ ಕೆಡುಕುಗಳಿಂದ ಸಂರಕ್ಷಿಸುವುದು ನನ್ನ ಕೈಯಲ್ಲಿದೆ ಎಂಬ ಭಾವನೆಯಿಂದಾಗಿ.

(ಹಾಗೆಂದು ನಾನು ಆಗ ನಂಬಿದ್ದೆನೆನ್ನಿ. ಯಾರನ್ನೇ ಆಗಲಿ ಆ "ವಿಧಿ" ಎಂದು ಕರೆ ಯುವಂಥ ನಿಯಮದ ಹಾಗೂ ಅಕಸ್ಮಿಕಗಳ ಕಠೋರ ಮಿಶ್ರ ಶಕ್ತಿಯ ದೌರ್ಜನ್ಯದಿಂದ ರಕ್ಷಿಸುವುದು ಸಾಧ್ಯ ಎನ್ನುವಂತೆ !)

ಕೆಲವು ವೇಳೆ ನಾನು ಅಲೀಸ್ಕವನ್ನು ಕಾಡಿನಲ್ಲಿ ವಾಯುಸಂಚಾರಕ್ಕೆ ಕರೆದೊಯ್ಯು ತ್ತಿದ್ದೆ. ಆಗ ನಾನು ಅದನ್ನು ಮಗುವಿನಂತೆ ನನ್ನ ತೋಳುಗಳಲ್ಲಿ ಎತ್ತಿಕೊಂಡಿರಬೇಕಾಗುತ್ತಿತ್ತು.

ಏಕೆಂದರೆ ತೊಗಲುಬಾರಿನೊಂದಿಗೆ ನಡೆಯುವುದನ್ನು ಅದು ಎಂದೂ ಕಲಿತಿರಲಿಲ್ಲ. ಇಂಥ ವಾಯುಸಂಚಾರಗಳೆಂದರೆ ಅಲೀಸ್ಕಕ್ಕೆ ಪ್ರಾಣ. ಕೋತಿಮರಿಯಂಥ ಕುತೂಹಲ ಅದಕ್ಕೆ. ಕಾಡಂತೂ ಅದರ ಕುತೂಹಲ ಕೆರಳಿಸುವಂಥ ಬೇಕಾದಷ್ಟು ವಸ್ತುಗಳಿಂದ ತುಂಬಿತ್ತು.

ಒಮ್ಮೆ ಒಂದು ಪ್ರಸಂಗ ಜರುಗಿತು. ಅದು ನನ್ನಲ್ಲಿ ಅಲೀಸ್ಕದ ಬಗೆಗೆ ಅಪಾರ ಗೌರವ ಹುಟ್ಟಿಸಿತು.

ಎಂದಿನಂತೆ ನಾವು ವಾಯುಸಂಚಾರ ಹೊರಟಿದ್ದೆವು. ಪ್ರಶಾಂತವಾದ, ಸ್ವಲ್ಪ ಖಿನ್ನತೆ ಯಿಂದ ಕೂಡಿದ ವಾತಾವರಣವಿದ್ದ ಮಧ್ಯಾಹ್ನದ ಕಾಲ. ಬೇಸಿಗೆಯಲ್ಲಿ ವಿಹರಿಸಲು ಬಂದಿದ್ದವರೆಲ್ಲ ಹೊರಟು ಹೋಗಿದ್ದರು. ಅವರ ಟ್ರಾನ್ಸಿಸ್ಟರುಗಳ ಅರುಚಾಟವಿಲ್ಲದೆ ಕಾಡು ಈಗ ನಿಶ್ಯಬ್ದವಾಗಿದ್ದಿತು. ನಾನು ಬಾಣದಷ್ಟು ನೇರವಾದ ಕಾಲುದಾರಿಯೊಂದರಲ್ಲಿ ನೆಟ್ಟಗೆ ನಡೆದಿದ್ದೆ. ಬರ್ಚ್ ಮರಗಳ ಕಾಂಡಗಳು ಪಾರದೀಪಕವಾಗಿದ್ದವು. ಸೂರ್ಯನ ಉಜ್ವಲ ಬೆಳಕಿದ್ದಿತು. ಆ ಮಹಾ ನೀರವತೆ ಕಿವುಡಾಗಿಸುವಂತಿತ್ತು. ಆಗ ಇದ್ದಕ್ಕಿದ್ದಂತೆ ನನಗೆ ಒಬ್ಬ ಹೆಂಗಸಿನ ಕೂಗಿ ಅರಚುವ ಶಬ್ದ ಕೇಳಿಬಂದಿತು. ನಾನು ತಿರುಗಿ ನೋಡಿದೆ. ಬಿಳಿಯ ಬೊಂತೆ ಕೂದಲಿನ ನಾಯಿಯೊಂದು, ಒಂದು ಕರುವಿನ ಗಾತ್ರದ ನಾಯಿ, ಸದ್ದು ಗದ್ದಲವಿಲ್ಲದೆ ನಮ್ಮ ಹಿಂದೆಯೇ ಕಾಲುದಾರಿಯಲ್ಲಿ ನಾಗಾಲೋಟ ಓಡಿಕೊಂಡು ಬರು ತ್ತಿತ್ತು. ಅದು ಪೈರೇಟ್ ನಾಯಿಯಾಗಿತ್ತು, ಅದೊಂದು ದಕ್ಷಿಣ ರಷ್ಯದ ಕುರಿನಾಯಿ ತಳಿಯ ಕ್ರೂರ ಸ್ವರೂಪದ ನಾಯಿಯಾಗಿತ್ತು.

ಪೈರೇಟ್ ನಾಯಿ ಕಾಯುತ್ತಿದ್ದ ತೋಟವೆಂದರೆ ಸ್ಥಳೀಯ ಬಾಲಕರಷ್ಟೆ ಅಲ್ಲ, ಇತರ ಜನರ ಸೇಬುಗಳನ್ನು ಕದಿಯುವ ಯಾವ ಭಾವನೆಯನ್ನೂ ಹೊಂದಿರದಿದ್ದಂಥ ಬೆಳೆದ ವರೂ, ಗಾವುದ ದೂರದಲ್ಲಿರುತ್ತಿದ್ದರು. ಅಂಥ ತೋಟದ ಬೇಲಿಯ ಪಕ್ಕದಲ್ಲಿ ನಡೆದು ಹೋಗುವಾಗ ಬಹು ಎಚ್ಚರಿಕೆಯಿಂದಿರುತ್ತಿದ್ದರು. ಏಕೆಂದರೆ ಬೇಲಿಯ ಅತ್ತ ಬದಿಯಲ್ಲಿ ಆ ಭಾರಿ ತುಪ್ಪುಳದ ನಾಯಿ ತನ್ನ ಹಳದಿ ಕೋರೆ ಹಲ್ಲುಗಳನ್ನು ಭೀಕರವಾಗಿ ಬಿಟ್ಟು ಕೊಂಡು ಅಡ್ಡಾಡುತ್ತಿರುತ್ತಿದ್ದಿತು.

ಅಂತಹ ರಾಕ್ಷಸ ಸ್ವರೂಪದ ನಾಯಿ ಈಗ ನಮ್ಮತ್ತ ನೇರವಾಗಿ ಓಡಿಕೊಂಡು ಬರುತ್ತಿದೆ. ಅದರ ಹಿಂದೆ ಎತ್ತರದ ಹಿಮ್ಮಡಿಗಳ ಷೂ ತೊಟ್ಟ ದಡೂತಿ ಹೆಂಗಸೊಬ್ಬಳು ಓಡಿ ಬರುತ್ತಿದ್ದಾಳೆ. ಅವಳು ನಾಯಿಯಿಂದ ಸಾಕಷ್ಟು ದೂರವೇ ಇದ್ದಾಳೆ. ಅವಳು

ನಾಯಿಯನ್ನು ಕೂಗಿ ಕರೆಯುತ್ತಿದ್ದಾಳೆ, ಕೈಯಲ್ಲಿದ್ದ ತೊಗಲು ಬಾರನ್ನು ಗಾಳಿಯಲ್ಲಿ ಆಡಿಸುತ್ತಿದ್ದಾಳೆ. ಆದರೆ ನಾಯಿ ಅವಳ ಕೂಗಿಗೆ ಕಿವಿಗೊಡುತ್ತಿಲ್ಲ. ತನ್ನ ಅಮಂಗಳ ಸೂಚಕ ಮೌನವನ್ನು ಉಳಿಸಿಕೊಂಡೇ ಓಡಿ ಬರುತ್ತಿದೆ.

ನನ್ನ ಮತ್ತು ನಾಯಿಯ ನಡುವಿನ ದೂರ ವಿಪತ್ಕಾರಕವಾಗಿ ಕಮ್ಮಿಯಾಗುತ್ತಿದ್ದಿತು. ಓಡುವುದರಲ್ಲಿ ಅರ್ಥವಿರಲಿಲ್ಲ. ನಿಂತಲ್ಲೇ ನಿಂತು ನಾಯಿಯ ಒಡತಿ ತೊಗಲುಬಾರಿನೊಂದಿಗೆ ಬರುವವರೆಗೂ ನಾಯಿಯೊಂದಿಗೆ ಸಂಭಾಷಣೆ ನಡೆಸುತ್ತ ಅದರ ಗಮನವನ್ನು ಬೇರೆ ಕಡೆಗೆ ತಿರುಗಿಸುವುದಕ್ಕಿಂತ ಓಡುವುದು ಹೆಚ್ಚು ಅಪಾಯಕಾರಿಯಾಗುತ್ತಿತ್ತು. ಅಂಜಿಕೆ ತೋರದಿರುವುದು ಮುಖ್ಯವಾಗಿದ್ದಿತು.

ಆದರೆ ಅಲೀಸ್ಕ ತಪ್ಪಿಸಿಕೊಂಡು ಹೋಗುವುದಕ್ಕೆ ಇನ್ನೂ ಸಾಕಷ್ಟು ಸಮಯ ವಿದ್ದಿತು. ನಾನು ಅದನ್ನು ಪೈರೇಟ್ ನಾಯಿಗೆ ಬಳುವಳಿಯಾಗಿ ನೀಡಲು ಸಿದ್ಧವಿರಲಿಲ್ಲ. ಅದನ್ನು ಕೂಡಲೇ ಬಿಟ್ಟು ಬಿಡಬೇಕಿದ್ದಿತು – ಅದನ್ನು ನಾನು ಪುನಃ ಎಂದೂ ಕಾಣ ಲಾಗದೆ ಹೋಗುವುದಾಗಿದ್ದರೂ...

ಅಲೀಸ್ಕವನ್ನು ಬಾಗಿ ನೆಲದ ಮೇಲಿರಿಸಿದೆ. ಅದು ಪೊದೆಗಳೊಳಕ್ಕೆ ನುಸುಳಿಕೊಂಡು ಹೋಗಿ ಕೂಡಲೇ ಕಣ್ಮರೆಯಾಯಿತು.

ನಾಯಿ ಬಹುಶಃ ಅಲೀಸ್ಕ ಓಡಿಹೋದುದನ್ನು ಕಾಣಲಿಲ್ಲವೆಂದು ಕಾಣುತ್ತೆ. ಅಥವಾ ನಾನೇ ಅದರ ಹಲ್ಲಿಗೆ ಹೆಚ್ಚು ಯೋಗ್ಯವಾಗಿದ್ದೆನೆಂದು ಅದು ನಿರ್ಧರಿಸಿತೋ ಏನೋ. ಅಂತೂ ಅದು ನನ್ನ ಕಡೆಗೇ ಓಡಿಕೊಂಡು ಬರ ತೊಡಗಿತು, ಮೌನದಿಂದ, ಬಗುಳದೆಯೇ. ಅದೇ ಅತ್ಯಂತ ಭೀಕರವಾಗಿದ್ದುದು.

ನಾನು ದಪ್ಪನಾದ ಹಳೆಯ ಬರ್ಚ್ ಮರವೊಂದಕ್ಕೆ ಒರಗಿ ನಿಂತೆ. ಈಗ ನನಗೂ ಆ ನಾಯಿಗೂ ಮಧ್ಯೆ ಎರಡು ಮೀಟರ್‌ಗಿಂತ ಹೆಚ್ಚು ದೂರವಿರಲಿಲ್ಲ. "ಪೈರೇಟ್, ಮುದ್ದು ನಾಯಿ" ಎಂದು ನಾನು ಬೇಸರ ತರಿಸುವಷ್ಟು ಸವಿಯಾದ ಅನುಗ್ರಹ ಸಂಪಾದಿ ಸುವಂಥ ಧ್ವನಿಯಲ್ಲಿ ಅದನ್ನು ಮಾತನಾಡಿಸ ತೊಡಗಿದೆ. "ದಯವಿಟ್ಟು ಕಚ್ಚ ಬೇಡಪ್ಪ..."

ನಾಯಿ ನಿಂತಿತು. ಅದು ಕಕ್ಕಾಬಿಕ್ಕಿಯಾದುದನ್ನು ಕಂಡು ನಾನು ಉತ್ತೇಜಿತಳಾಗಿ ಹೆಚ್ಚು ಸ್ಥಿರವಾದ ಧ್ವನಿಯಲ್ಲಿ ಮಾತು ಮುಂದುವರಿಸಿದೆ: "ನೀನು ಎಷ್ಟು ಸುಂದರವಾಗಿ ದೀಯ ! ಎಂಥ ಬುದ್ಧಿಶಾಲಿ ! ತುಂಬ ಕರುಣಾಳು ನಾಯಿ ನೀನು !..."

ಆ ಹೊತ್ತಿಗೆ ನಾಯಿ ನನ್ನ ಮೇಲೆ ಹಾರಲು ಮೈ ಬಿಗಿಗೊಳಿಸಿಕೊಳ್ಳುತ್ತಿದ್ದುದನ್ನು ನಾನು ಕಂಡೆ. ಅದು ನನ್ನ ಕತ್ತಿನತ್ತ ಗುರಿ ಇಟ್ಟಂತೆ ಕಾಣುತ್ತಿತ್ತು. ಮೊದಲ ನೆಗೆತ ಸಾಕಷ್ಟು ಎತ್ತರವಾಗಿರಲಿಲ್ಲ. ಎರಡನೆಯದನ್ನು ನಾನು ಹೇಗೆ ತಪ್ಪಿಸಿಕೊಂಡೆನೋ ನನಗೇ ಗೊತ್ತಿಲ್ಲ.

ಮೂರನೆಯ ನೆಗೆತವನ್ನು ಎದುರಿಸಲು ನಾನು ಭಯಭೀತಳಾಗಿ ಕಾಯುತ್ತ ನಿಂತೆ. ಅದೇ ಹೊತ್ತಿನಲ್ಲಿ ಪೈರೇಟ್‌ನ ಕೋಪೋದ್ರಿಕ್ತ ಒಡತಿಯ ಓಟದ ಪ್ರಗತಿಯನ್ನು ಕಣ್ಣಂಚಿನಿಂದ ನೋಡುತ್ತಲೂ ಇದ್ದೆ. ನಾಯಿ ಎಲ್ಲಿ ನನ್ನನ್ನು ಕಚ್ಚಿ ಬಿಡುವುದೋ ಎಂಬ ಭಯ ಅವಳ ಓಟದ ಶಕ್ತಿಯನ್ನು ಹೆಚ್ಚಿಸಿದ್ದಿತು. ಆದರೂ ಅವಳು ಅಷ್ಟು ಬೇಗ ಬರುವುದು ಸಾಧ್ಯವಿರಲಿಲ್ಲ. ಬಂದರೂ ಆ ಸ್ಥೂಲ ಕಾಯದ ಹೆಂಗಸು ಈ ಉಗ್ರ ಸ್ವರೂಪದ ನಾಯಿಯನ್ನು ಹತೋಟಿಯಲ್ಲಿರಿಸ ಬಲ್ಲವಳಿದ್ದಳೆ?

ಮೂರನೆಯ ಬಾರಿ ನನ್ನ ಮೇಲೆ ಹಾರಲು ಸಿದ್ಧವಾಗುತ್ತಿದ್ದ ಪೈರೇಟ್ ನಾಯಿ ಇದ್ದಕ್ಕಿದ್ದಂತೆ ಗೋಳುಕರೆಯ ತೊಡಗಿತು. ನನ್ನ ಕಣ್ಣುಗಳನ್ನೇ ನಾನು ನಂಬದಾದೆ – ನನ್ನ ಪುಟ್ಟ ಧೈರ್ಯಶಾಲಿ ನರಿಯಮರಿ ತನ್ನ ಹಲ್ಲುಗಳನ್ನು ನಾಯಿಯ ಹಿಂಗಾಲಿನೊಳಕ್ಕೆ ಆಳವಾಗಿ ಹುದುಗಿಸಿತ್ತು, ಬುಲ್‌ಡಾಗ್‌ನಂತೆ...

ಪೈರೇಟ್ ಮಿಂಚಿನ ವೇಗದಲ್ಲಿ ಹಿಂದಿರುಗಿ ಅಲೀಸ್ಕವನ್ನು ಕಚ್ಚಲು ಯತ್ನಿಸಿತು. ಆದರೆ ಅದರ ಕೋರೆ ಹಲ್ಲುಗಳು ಗಾಳಿಯಲ್ಲಷ್ಟೆ ಲಟ್ಟೆಂದವು. ಅಲೀಸ್ಕ ಆಗಲೇ ತನ್ನ ತುಪ್ಪುಳದ ಬಾಲವನ್ನು ಎತ್ತಿ ನಿಲ್ಲಿಸಿಕೊಂಡು ಓಡಿ ಹೋಗುತ್ತಿದ್ದಿತು. ಅದು ಹಾಗೆ ತನ್ನ ಬಾಲವನ್ನು ಮೇಲಕ್ಕೆತ್ತಿಕೊಂಡಾಗ ಅದರ ಮೈ ಉದ್ದ ಅರ್ಧದಷ್ಟು ಕಮ್ಮಿಯಾಗುತ್ತಿತ್ತು. ಹಾಗಾಗಿ ಅದನ್ನು ಹಿಡಿಯುವುದು ಎರಡು ಪಟ್ಟು ಹೆಚ್ಚು ಕಷ್ಟವಾಗುತ್ತಿತ್ತು. ಪೈರೇಟ್ ನನ್ನ ವಿಷಯ ಸಂಪೂರ್ಣವಾಗಿ ಮರೆತು ಅಲೀಸ್ಕವನ್ನು ಅಟ್ಟಿಸಿಕೊಂಡು ಹೋಯಿತು.

ನಾನು ಸಮಾಧಾನದ ನಿಟ್ಟುಸಿರು ಬಿಟ್ಟು ಮನೆಯ ಕಡೆಗೆ ಧಾವಿಸಿದೆ. ಅಲೀಸ್ಕ ಆ ದೊಡ್ಡ ನಾಯಿಯಿಂದ ತಪ್ಪಿಸಿಕೊಂಡು ಹೋಗುವುದೆಂಬುದರಲ್ಲಿ ನನಗೇನೂ ಸಂಶಯ ವಿರಲಿಲ್ಲ. ಆದರೆ ಅದು ಮನೆಗೆ ಹಿಂದಿರುಗುವುದೇ ಎಂಬ ಅನುಮಾನವಂತೂ ಇದ್ದೇ ಇದ್ದಿತು.

ಮನೆಗೆ ಬಂದವಳೇ ಅಲೀಸ್ಕದ ಆವರಣಕ್ಕೆ ಓಡಿಹೋಗಿ ನೋಡಿದೆ. ಅದು ಅಲ್ಲಾ

ಗಲೇ ತನ್ನ ಮನೆಯ ಚಾವಣಿಯ ಮೇಲೆ ಶಾಂತವಾಗಿ ಮಲಗಿತ್ತು. ಅದರ ಪಕ್ಕಗಳು ಜೋರಾಗಿ ಉಬ್ಬಿ ಇಳಿಯುತ್ತಿದ್ದುದಷ್ಟೆ ಅದು ವೇಗದಿಂದ ಓಡಿ ಬಂದಿದ್ದಿತೆಂಬುದನ್ನು ಸೂಚಿಸುತ್ತಿದ್ದಿತು. ಇಲ್ಲದಿದ್ದರೆ ಆದರ ಇಡೀ ಭಂಗಿ – ಕಣ್ಣುಗಳನ್ನು ಅರೆಮುಚ್ಚಿಕೊಂಡು ಆಲಸ್ಯದಿಂದ ಮೈ ಚಾಚಿ ಮಲಗಿದ್ದ ಆ ಭಂಗಿ – ಹೀಗೆ ಹೇಳುವಂತಿತ್ತು: "ಏನು ಮಹಾ ಅಂತ ನೀವು ಅಂದುಕೊಂಡಿರುವುದು? ನಾನು ಸುಮ್ಮನೆ ಯಾವುದೇ ಆತ್ಮಗೌರವವುಳ್ಳ ನರಿ ವರ್ತಿಸುವಂತಷ್ಟೆ ವರ್ತಿಸಿದೆ. ನಮ್ಮ ಬೆಂಗಾಡುಗಳಲ್ಲೂ ಮರುಭೂಮಿಗಳಲ್ಲೂ ಕಷ್ಟದಲ್ಲಿರುವ ಮಿತ್ರರನ್ನು ನಾವು ತೊರೆದು ಹೋಗುತ್ತೇವೆಂದುಕೊಂಡಿರಾ?"

ಅಕ್ಟೋಬರ್ ಬಂದಿತು. ಮಳೆ ಒಂದೇ ಸಮನಾಗಿ ನಮ್ಮ ಮನೆಯ ಚಾವಣಿಯ ಮೇಲೆ ಟಪಟಪ ಸದ್ದು ಮಾಡ ತೊಡಗಿತ್ತು. ಆದರೂ ನಾವಿನ್ನೂ ನಗರದ ಹೊರಗಿನ ಆ ಮನೆಯಲ್ಲೇ ಇದ್ದೆವು. ಅಲೀಸ್ಕದ ವಿಷಯ ಏನು ಮಾಡುವುದು ಅನ್ನುವುದನ್ನು ನಾವಿನ್ನೂ ನಿರ್ಧರಿಸದಾಗಿದ್ದೆವು. ಒಂದು ವಿಷಯ ಮಾತ್ರ ನಮಗೆ ಸ್ಪಷ್ಟವಾಗಿತ್ತು – ಅದನ್ನು ನಗರದ ಗೃಹವಿಭಾಗದಲ್ಲಿ ಇರಿಸಿಕೊಂಡಿರುವುದು ಅಸಾಧ್ಯವಾಗಿತ್ತು. ಕೊನೆಗೆ ಜೀವನವೇ ನಮ್ಮ ಸಮಸ್ಯೆಯನ್ನು ಪರಿಹರಿಸಿತು.

ಅಕ್ಟೋಬರ್ ಕೊನೆಯ ಹೊತ್ತಿಗೆ ನಾನು ಕೆಲಸದ ಮೇಲೆ ಎಲ್ಲಿಗೋ ಹೋಗ ಬೇಕಾಗಿ ಬಂದಿತು. ತುಂಬ ಸಂಶಯಗಳೊಂದಿಗೆ ನಾನು ನಮ್ಮ ಪ್ರಾಣಿಗಳನ್ನೆಲ್ಲ ನಮ್ಮ ಮನೆಯ ಮಾಲೀಕಿ ಅಜ್ಜಿ ಮಾಷಳ ವಶಕ್ಕೆ ಒಪ್ಪಿಸಬೇಕಾಗಿ ಬಂದಿತು. ಆ ಮುದುಕಿಗೆ ಅಲೀ ಸ್ಕವನ್ನು ಕಂಡರೆ ಆಗುತ್ತಿರಲಿಲ್ಲ. ಅಂಥ "ಕೆಲಸಕ್ಕೆ ಬಾರದ" ಪ್ರಾಣಿಯ ವಿಷಯದಲ್ಲಿ ಯಾರಾದರೂ ಯಾಕೆ ಅಷ್ಟೊಂದು ಕಾಳಜಿ ವಹಿಸಬೇಕು ಅನ್ನುವುದೇ ಅವಳಿಗೆ ಅರ್ಥ ವಾಗುತ್ತಿರಲಿಲ್ಲ.

ಮೂರು ವಾರಗಳನಂತರ ನಾನು ಹಿಂದಿರುಗಿದಾಗ ಅಲೀಸ್ಕದ ಮನೆ ಖಾಲಿಯಾಗಿತ್ತು. ನಾನು ಅಜ್ಜಿ ಮಾಷಳ ಬಳಿಗೆ ಓಡಿದೆ. ಅವಳು ಆನಂದದಿಂದ ನನ್ನನ್ನು ಸ್ವಾಗತಿಸುತ್ತ ಹೇಳಿದಳು: "ಅದೊಂದು ನರಿ, ಹಾಳಾದ್ದು, ಓಡಿ ಹೋಯಿತು. ನೀವು ಹೋದ ಎರಡು ದಿನಕ್ಕೇ ಅದು ಓಡಿ ಹೋಯಿತು. ಬೆಳಿಗ್ಗೆ ನೀವು ಹೇಳಿದ ಹಾಗೇ ಆಹಾರವನ್ನು ಒಂದು ಬೋಗುಣಿಗೆ ಹಾಕಿಕೊಂಡು ಅದಕ್ಕೆ ಕೊಡಲು ಬಂದೆ. ಈಗ ಅದು ಹೊರಕ್ಕೆ ಹಾರಿ ಬರುತ್ತೆ, ನನ್ನನ್ನು ಕಂಡು ಕೆಮ್ಮಲು ಶುರು ಮಾಡುತ್ತೆ ಅಂದುಕೊಂಡಿದ್ದೆ. ಹೌದು,

ಅದು ಹಾಗೆಯೇ ಮಾಡುತ್ತಿದ್ದುದು. ನಾನು ಮಾಡುತ್ತಿದ್ದ ಸೇವೆಗೆಲ್ಲ ಅದು ನೀಡುತ್ತಿದ್ದ ಪ್ರತಿಫಲ ಅಷ್ಟೇ ! ಆದರೆ ಅದು ಹೊರಕ್ಕೆ ಹಾರಿ ಬರಲೇ ಇಲ್ಲ. ಬಾಗಿಲು ನೋಡಿದೆ. ಸ್ವಲ್ಪ ತೆರೆದಿತ್ತು. ನಾನು ಹಿಂದಿನ ರಾತ್ರಿ ಅಗುಣಿ ಹಾಕುವುದನ್ನು ಮರೆತಿದ್ದಿರಬೇಕು. ಎಂಥ ಕುತಂತ್ರಿ ಆ ನರಿ... ಅಲ್ಲ, ಇದೇನು ಅಳೋದು ಯಾಕೆ? ಅದು ಹೋದದ್ದು ಒಳ್ಳೆಯದೇ ಆಯಿತು. ನಿಮಗೂ ತೊಂದರೆ ತಪ್ಪಿತು. ಎಷ್ಟು ಕಷ್ಟಪಡುತ್ತಿದ್ದಿರಿ ಅದನ್ನು ಇಟ್ಟು ಕೊಂಡು !"

ಅಲೀಸ್ಕ ಹೊರಟು ಹೋಗಿ ಇಪ್ಪತ್ತಕ್ಕೂ ಹೆಚ್ಚು ದಿನಗಳಾಗಿವೆ. ಯಾವುದೇ ತೊಂದರೆಗೂ ಸಿಕ್ಕಿ ಬೀಳದೆ ಇದ್ದಿದ್ದರೆ ಈಗಾಗಲೇ ಅದು ಹಲವಾರು ಬಾರಿ ನಮ್ಮ ಮನೆಗೆ ಬಂದಿರುತ್ತಿದ್ದಿತು ಎಂಬುದರಲ್ಲಿ ನನಗೆ ಅನುಮಾನವೇ ಇರಲಿಲ್ಲ. ಆದರೆ ಮನೆಯಲ್ಲಿ ಅಜ್ಜಿ ಮಾಷ ಬಿಟ್ಟು ಬೇರಾರೂ ಇಲ್ಲ...

ಬಹುಶಃ ಅಲೀಸ್ಕದ ಸ್ವಾತಂತ್ರ್ಯದ ಮೊದಲ ದಿನವೇ ಅದರ ಕೊನೆಯ ದಿನವೂ ಆಗಿದ್ದಿತೇನೋ. ನಾಯಿಗಳಾಗಲೀ ಬೇಟೆಗಾರರಾಗಲೀ ಅದನ್ನು ಸುಲಭವಾಗಿ ಬಿಟ್ಟುಕೊಡುತ್ತಿರಲಿಲ್ಲ. ತುಂಬ ನಂಬಿಕೆಯ ಪ್ರಾಣಿ ಆಗಿತ್ತು ಅದು, ಈ ಜಗತ್ತಿಗೆ ಇದ್ದಕ್ಕಿದ್ದಂತೆ ತಂದು ಹಾಕಲ್ಪಟ್ಟಿದ್ದಿತು. ಬೇರೆ ವಿಷಯ ಏನೇ ಆಗಿರಲಿ, ತನ್ನ ಆಹಾರವನ್ನು ತಾನು ಹೇಗೆ ಪಡೆದುಕೊಳ್ಳಬೇಕು ಅನ್ನುವುದೂ ಅದಕ್ಕೆ ಗೊತ್ತಿರಲಿಲ್ಲ...

ಅದನ್ನು ಪುನಃ ಕಾಣುವ ಹೆಚ್ಚಿನ ಭರವಸೆ ಇಲ್ಲದೆ ನಾನು ಒಂದು ತುಣುಕು ಮಾಂಸವನ್ನು ಅದರ ಮನೆಯ ಚಾವಣಿಯ ಮೇಲೆ ಇರಿಸಿದೆ. ಬೆಳಿಗ್ಗೆ ಅದು ಇನ್ನೂ ಅಲ್ಲೇ ಇದ್ದಿತು.

ಮಾರನೆಯ ಬೆಳಿಗ್ಗೆ ಅದು ಅಲ್ಲಿರಲಿಲ್ಲ. ಆದರೆ ನರಿಯ ಮನೆಯ ಪಕ್ಕದಲ್ಲಿ ಕೆಸರಿನಲ್ಲಿ ಬೆಕ್ಕಿನ ಪಾದಗಳ ಸ್ಪಷ್ಟ ಗುರುತುಗಳಿದ್ದವು.

ನಾವು ನಗರಕ್ಕೆ ಹಿಂದಿರುಗಿದೆವು.

ಹೇಗೇ ಆಗಲಿ, ಅಲೀಸ್ಕದ ಮನೆಯ ಚಾವಣಿಯ ಮೇಲೆ ಕೆಲವು ಮಾಂಸದ ತುಣುಕುಗಳನ್ನು ಇರಿಸಿರಬೇಕೆಂದು ನಾನು ಅಜ್ಜಿ ಮಾಷಳನ್ನು ಬೇಡಿಕೊಂಡೆ. ಮುದುಕಿ ನನ್ನ ಬೇಡಿಕೆಯನ್ನೇನಾದರೂ ಮನ್ನಿಸಿದ್ದರೆ ಅದರಿಂದ ಬೇಸಿಗೆ ನಿವಾಸಿಗಳು ತೊರೆದು ಹೋಗಿದ್ದ ಯಾವುದಾದರೂ ಬೀದಿ ಬೆಕ್ಕುಗಳಿಗಷ್ಟೆ ಲಾಭವಾಗುತ್ತಿದ್ದಿತು.

ಕೆಲಸದ ಮೇಲೆ ಬೇರೆ ಸ್ಥಳಕ್ಕೆ ಹೋಗಲು ಒದಗಿ ಬಂದ ಮೊದಲ ಅವಕಾಶವನ್ನೇ ನಾನು ಒಪ್ಪಿಕೊಂಡೆ. ಹಿಂದಿರುಗಿದ ಮೇಲೆ ಇಡೀ ಚಳಿಗಾಲ ನಾನು ಊರು ಬಿಟ್ಟು ಹೊರಗೆ ಹೋಗಲೇ ಇಲ್ಲ. ಮಾರ್ಚ್ ತಿಂಗಳಲ್ಲಷ್ಟೆ ನಾನು ಅಜ್ಜಿ ಮಾಷಳನ್ನು ಕಾಣಲು ಹೋದೆ.

ಅದೊಂದು ಉಜ್ವಲ ವಸಂತದ ದಿನವಾಗಿತ್ತು. ನನ್ನ ನೆನಪುಗಳು ತಮ್ಮ ತೀಕ್ಷ್ಣತೆಯನ್ನು ಸ್ವಲ್ಪ ಕಳೆದುಕೊಂಡಿದ್ದವು. ಯಾವ ನೆನಪಾದರೂ ಅಷ್ಟೆ ಕಾಲ ಸಂದಂತೆ ಅಳಿಸಿ ಹೋಗುತ್ತೆ... ಅಜ್ಜಿ ಮಾಷಳನ್ನು ನೋಡಲು ಹೋದಾಗ ನಾನು ಅಲೀಸ್ಕ ಇದ್ದ ಮನೆಯ ಬಳಿಗೆ ಹೋಗದಿರಲು ಎಚ್ಚರಿಕೆ ವಹಿಸಿದ್ದೆ.

ಅಂದು ರಾತ್ರಿ ನನಗೆ ಅಲೀಸ್ಕದ್ದೇ ಕನಸು. ಅದರ ಧ್ವನಿ, ಅದರ ಆನಂದಾಶ್ಚರ್ಯಗಳನ್ನು ವ್ಯಕ್ತಪಡಿಸುತ್ತಿದ್ದಂಥ ಚಿಮ್ಮಂಡೆಯಂಥ ಧ್ವನಿ, ಕೇಳಿಬಂದಂತಾಗಿ ನಾನು ಎಚ್ಚರಗೊಂಡೆ.

ದೀಪ ಹಾಕಿದೆ. ಸ್ವಲ್ಪ ಹೊತ್ತು ಓದಿದೆ. ಮತ್ತೆ ಮಲಗಿದೆ. ಬೆಳಿಗ್ಗೆ ಹೊರಗೆ ಮಂಜಿನಲ್ಲಿ ಅನೇಕ ಜಾಡು ಗುರುತುಗಳನ್ನು ಕಂಡೆ. ಅವು ನನ್ನ ಹಾಸಿಗೆ ಇದ್ದ ಕಿಟಕಿಯತ್ತವೇ ಹೋಗಿದ್ದವು. ನನ್ನ ಹೃದಯ ಒಮ್ಮೆ ಬಡಿಯುವುದನ್ನು ನಿಲ್ಲಿಸಿತು. ಐದು ಬೆರಳುಗಳ ಆ ಜಾಡುಗಳ ಗುರುತುಗಳು ತುಂಬ ಮಟ್ಟಿಗೆ ಅಲೀಸ್ಕದ ಪಾದಗಳ ಗುರುತುಗಳಂತೆಯೇ ಇದ್ದವು.

ಪುಟ್ಟ ನರಿಮರಿ ಇನ್ನೂ ಜೀವಂತವಾಗಿದೆಯೆ? ಯಾವುವೋ ಅಸ್ಪಷ್ಟ ನೆನಪುಗಳು ಅದನ್ನು ಅಜ್ಜಿ ಮಾಷಳ ಮನೆಯ ಬಳಿಗೆ ಕರೆತಂದಿದ್ದವೇ – ಅದೂ ನಾನು ಅಲ್ಲಿ ರಾತ್ರಿ ಕಳೆಯುತ್ತಿದ್ದ ಕಾಲಕ್ಕೆ ಸರಿಯಾಗಿ?

ಅಥವಾ ಬಹುಶಃ ಬೇರೆ ಯಾವುದೋ ಪ್ರಾಣಿ ಆ ಗುರುತುಗಳನ್ನು ಬಿಟ್ಟು ಹೋಗಿದ್ದಿತೆ? ಎಷ್ಟೇ ಆಗಲಿ ಕಾಡು ಸಮೀಪದಲ್ಲೇ ಇದ್ದಿತು. ವಾಸ್ತವವಾಗಿ ನನಗೆ ಈ ಎರಡನೆಯ ಸಂಭವವೇ ಹೆಚ್ಚು ಇಷ್ಟವಾಗಿತ್ತು. ಏಕೆಂದರೆ ಪ್ರಾಣಿಯೊಂದು, ನಾನು ಬಿಟ್ಟು ಬೇರಾರೂ ಬಯಸದಿದ್ದಂಥ, ನನಗೇ ಮಾರುಹೋಗಿದ್ದಂಥ ಪ್ರಾಣಿಯೊಂದು, ಚಿರಂತನ ಏಕಾಂತತೆಗೆ ಗುರಿಯಾಗಿ ಸಮೀಪದಲ್ಲೇ ಅಲೆದಾಡುತ್ತಿರುವುದನ್ನು ಕಲ್ಪಿಸಿಕೊಳ್ಳುವುದೂ ನನಗೆ ಭಯಂಕರವಾಗಿದ್ದಿತು. ಆ ಪ್ರಾಣಿಗೆ ನಾನು ಜವಾಬ್ದಾರಳಾಗಿದ್ದೆ. ಏಕೆಂದರೆ ನಾನೇ

ಅದರೊಂದಿಗೆ ಸ್ನೇಹ ಬೆಳೆಸಿದ್ದುದು. ಆದರೆ ನಾನು ಅದನ್ನು ರಕ್ಷಿಸಲು ಅಸಮರ್ಥಳಾಗಿದ್ದೆ.

ಅಲೀಸ್ಕ... ಎಲ್ಲಿಂದ ಬಂದಿದ್ದಿತೋ ಎಲ್ಲಿಗೆ ಹೊರಟು ಹೋಯಿತೋ ಯಾರೂ ತಿಳಿಯರು. ಮತ್ತೆ ಮಾರ್ಚ್ ತಿಂಗಳ ಆ ರಾತ್ರಿ ತೇವದ ಮಂಜಿನ ಮೇಲೆ ಯಾವ ಪ್ರಾಣಿ ಆ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದಿತು ಅನ್ನುವುದೂ ಎಂದಿಗೂ ನನಗೆ ತಿಳಿಯಬರದು...



ಓದುಗರಿಗೆ

ಈ ಕೃತಿಯು ಅನುವಾದ, ಮುದ್ರಣ ಹಾಗೂ ರಚನೆ ಕುರಿತು ನಿಮ್ಮ ಅಭಿಪ್ರಾಯ ಅಭಿಲಾಷೆಗಳನ್ನು ತಿಳಿಸಿ ನಮಗೆ ಪತ್ರ ಬರೆದಲ್ಲಿ ನಾವು ಉಪಕೃತರು. ನಮ್ಮ ವಿಳಾಸ:

Raduga Publishers
17, Zubovsky Boulevard
Moscow, USSR



ನಮ್ಮ ಪ್ರತಿಗಳು ದೊರೆಯುವ ಸ್ಥಳ:

ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್,
ಎಂಬೆಸಿ ಸೆಂಟರ್
ಕ್ರೆಸೆಂಟ್ ರೋಡ್
ಬೆಂಗಳೂರು – 560001

ಕೆಂಪೇಗೌಡ ಸರ್ಕಲ್,
ಬೆಂಗಳೂರು – 560009

ಕೆಎಸ್ಆರ್ ರೋಡ್,
ಮಂಗಳೂರು – 575001

